

ಕರ್ನಾಟಕ ಸರ್ಕಾರ



# ಹಿಂಗಾರ

ತ್ರೈಮಾಸಿಕ



ನಿರ್ಮಾಲ್ ತಿಂಗ - ಬೆಣ್ತೆಂಗ - ಜಾತ್ರೆ ತಿಂಗ



ಸಾಂಸ್ಕೃತಿಕ ಸಮಾವೇಶ ಉದ್ಘಾಟನೆ, ಚೇರಂಬಾಣೆ, ಕೊಡಗು (31.10.2015)



ಸಾಂಸ್ಕೃತಿಕ ಸಮಾವೇಶ, ಉದ್ಘಾಟನೆ, ಕರ್ನಾಟಕ ಸಂಘ, ನವದೆಹಲಿ (12.12.2015)




ಸಾಂಸ್ಕೃತಿಕ ಸಮಾವೇಶ, ಉದ್ಘಾಟನೆ, ಪುತ್ತೂರು. (04.10.2015)



# ಹಿಂಗಾರ



ಕರ್ನಾಟಕ
ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್

**ಕೊಲ್ಯದ ಗಿರೀಶ್**

ಸಂಪಾದಕರ್

**ಡಾ. ಪೂವಪ್ಪ ಕಣಿಯೂರು**
**ಕುಡೆಕಲ್ ಸಂತೋಷ್**

ವ್ಯವಸ್ಥಾಪಕ ಸಂಪಾದಕರ್

**ಉಮರಬ್ಬ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka** | **ಕರ್ನಾಟಕ** |
| **Arebhasa Culture and** | **ಅರೆಭಾಷೆ ಸಂಸ್ಕೃತಿ ಮತ್ತು** |
| **Sahitya Academy** | **ಸಾಹಿತ್ಯ ಅಕಾಡೆಮಿ** |
| Coffee Kripa, Ist Floor | ಕಾಫಿಕೃಪಾ, ಒಂದನೇ ಮಹಡಿ, |
| Rajaseat Road | ರಾಜಾಸೀಟ್ ರಸ್ತೆ |
| Madikeri- 571201 | ಮಡಿಕೇರಿ -೫೭೧ ೨೦೧ |
| Ph: 08272 - 223055 | ದೂರವಾಣಿ : ೦೮೨೭೨ - ೨೨೩೦೫೫ |
| arebaseacademy@gmail.com | arebaseacademy@gmail.com |
| www.arebaseacademy.com | www.arebaseacademy.com |
| Chief Editor : | ಪ್ರಧಾನ ಸಂಪಾದಕರ್ |
| **Kolyda Girish** | **ಕೊಲ್ಯದ ಗಿರೀಶ್** |
| Editor's : | ಸಂಪಾದಕರ್ |
| **Dr. Poovappa Kaniyoor** | **ಡಾ. ಪೂವಪ್ಪ ಕಣಿಯೂರು** |
| **Kudekal Santhosh** | **ಕುಡೆಕಲ್ ಸಂತೋಷ್** |
| Managing Editor : | ವ್ಯವಸ್ಥಾಪಕ ಸಂಪಾದಕರ್ |
| **Umarabba** | **ಉಮರಬ್ಬ** |
| Cover Design : | ಮುಖಪುಟ ವಿನ್ಯಾಸ |
| **Kallur Nagesh** | **ಕಲ್ಲೂರು ನಾಗೇಶ** |
| Printed at : | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Pages : 72 | ಪುಟಗಳು : ೭೨ |
| Copies : 700 | ಪ್ರತಿಗಳು : ೭೦೦ |
| Vol. : 1-2 | ಸಂಪುಟ ೧ ಸಂಚಿಕೆ ೨ |
| Period :October To December | ಅಕ್ಟೋಬರ್-ದಶಂಬರ್ |
| Price : Rs. 20 | ಬೆಲೆ : ರೂ. ೨೦ |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. ೨೦೦ |

# ಅಧ್ಯಕ್ಷರ ಮಾತ್

ಅಕಾಡೆಮಿ ಸುರುನ ತ್ರೈಮಾಸಿಕನ ಹೊರ ತಾಕನ ನಾವ್ಗೆ ನಮ್ಮೊವು ಇದರ ಹೇಂಗೆ ಸ್ವೀಕರ್ರುವೆಂತೇಳುವ ಅಳ್ಕ್ ಇತ್ತ್. ಆದರೆ ಅರೆಭಾಷಿಕರ್ ಇದರ ಕುಷಿಲಿ ಸ್ವೀಕರ್ಸಿ ನಮ್ಮ ಅಳ್ಕ್‌ನ ದೂರ ಮಾಡ್ಯೊಳೊ. ಪತ್ರಿಕೆ ನಡ್ಯೊದು ನಿಮ್ಮಂದಲೇ. ಇನ್ನ್ ಮುಂದೆನೂ ನಿಮ್ಮ ಪ್ರೀತಿ ಹೀಂಗೆನೆ ಇರ್ಲಿಂತೇಳಿ ನಾವು ಬಯಸ್ಸುವೆ.

ಅರೆಭಾಷೆನ ಕಥೆ, ಕವನ, ಚುಟುಕು, ಗಾದೆಗ ಹಾಂಗೆನೆ ಸಂಸ್ಕೃತಿಗೆ ಸಂಬಂಧಿಸಿದ ವೈಚಾರಿಕ ಬರಹಗಳ ಕೊಟ್ಟ್ ನಮ್ಮನ್ನ್ ಬೆಂಬಲ್ಸಿಯೊಳೊರಿ. ನಾವು ನಿಮ್ಮಂದ ಇನ್ನುನೂ ಪೊರ್ಲ್‌ನ ಅರೆಭಾಷೆನ ಸೊಗಡ್ ಇರ್‌ಂವ ಬರಹಗಳ ನಿರೀಕ್ಷಿಸ್‌ತ್ತಾ ಒಳೊ. ಅಕಾಡೆಮಿನ ಸ್ಥಾಪನೆ ಮಾಡ್ದ ಉದ್ದೇಶಲಿ ನಮ್ಮ ಭಾಷೆ– ಸಂಸ್ಕೃತಿನ ಉಳ್ಸಿ ಬೆಳ್ಸುದು ಒಂದಾಗುಟ್ಟು. ನಾವ್ ಈ ದಾರಿಲಿ ಕಾರ್ಯಕ್ರಮ ನಡೆಸ್ತಾ ಒಳೊ.

ಈ ಎರ್ಡನೇ ಸಂಚಿಕೆಲಿ ನಾವ್ ನಿರ್ನಾಲ್, ಬೆಣ್ತಿಂಗ, ಜಾಕ್ತಿ ತಿಂಗಳ್‌ಲಿ ಮಾಡ್ದ ಸಾಂಸ್ಕೃತಿಕ ಸಮಾವೇಶನ ಹಾಂಗೆ ಪ್ರಾಯೋಜಿಸಿದ ಜಂಬರನ ದಾಖಲಿಸುವ ಕಾರ್ಯ ಮಾಡ್ಯೊಳೊ. ಪ್ರಧಾನವಾಗಿ ನಮ್ಮ ಅಕಾಡೆಮಿಂದ ನಡ್ಸಿದ ಕಾರ್ಯಕ್ರಮಗಳ ನಿಮ್ಮ ಮುಂದೆ ಇಸುವ ಒಂದು ಸಣ್ಣ ಪ್ರಯತ್ನನ ನಾವ್ ಈ ಮೂಲಕ ಮಾಡ್ತಾ ಒಳೊ. ಆಟಿ ತಿಂಗ ಕಳ್ದ್‌ತೇಳ್ರೆ ನಾವ್ಗೆ ಹಬ್ಬಗ ಸಾಲ್ ಸಾಲಾಗಿ ಬಂದವೆ. ದೀಪಾವಳಿ, ಕೈಲ್ ಮುಹೂರ್ತ ಇಂತ ಹಬ್ಬಗಳ ನಾವು ಆಚರ್ಸಿ ಸಂಭ್ರಮಿಸ್ತಾ ಒಳೊ.

ಕೊಡ್ಗ್‌ನ ಚೇರಂಬಾಣೆಲಿ ನಡ್ದ ಕಾರ್ಯಕ್ರಮಲಿ ನಾವು ಸುರ್‌ನ ತ್ರೈಮಾಸಿಕ ಸಂಚಿಕೆ ಹಿಂಗಾರನ ಮಾಜಿ ಸಭಾಧ್ಯಕ್ಷರ್‌ಗ್ ಹಾಂಗೆನೆ ಅಕಾಡೆಮಿ ಸ್ಥಾಪನೆಲಿ ಮುಖ್ಯ ಪಾತ್ರ ವಹ್ಸಿದ ಕೆ.ಜಿ ಬೋಪಯ್ಯನವರ ಕೈಲಿ ಬಿಡುಗಡೆಗೊಳ್ಸಿಯೊಳೊ. ಪುತ್ತೂರ್‌ಲಿ ನಡ್ದ ಸಮಾವೇಶದ

ಕಾರ್ಯಕ್ರಮಲಿ ಅರೆಭಾಷೆನ ಸಾಹಿತ್ಯ, ಸಂಸ್ಕೃತಿ ವಿಚಾರ ಗೋಷ್ಠಿ ನಡ್ಸಿ, ಅರೆಭಾಷೆನ ಪೊರ್ಲುನ ಅಲ್ಲಿನ ಸಮುದಾಯಕ್ಕೆ ಪರಿಚಯ ಮಾಡ್ವ ಕೆಲ್ಸ ಭಾರೀ ಲಾಯಿಕಿಲಿ ನಡ್ಸಿಕೊಟ್ಟೊಳೊ. ಅರೆಭಾಷೆನ ಸಂಸ್ಕೃತಿ ಹಾಂಗೆನೆ ಆ ಭಾಷೆನ ಅನನ್ಯತೆನ ತಿಳ್ಸುವ ಒಂದು ಉದ್ದೇಶಲಿ ನಾವು ನವದೆಹಲಿಲಿ ಅರೆಭಾಷಿಕ ಮತ್ತು ಅನ್ಯ ಭಾಷಿಕರಿಗಾಗಿ ಕಾರ್ಯಕ್ರಮ ನಡ್ಸಿ ಎಲ್ಲವರ ಮೆಚ್ಚುಗೆಗೆ ಪಾತ್ರರಾಗೊಳೊ.

ನಮ್ಮ ಹಕ್ಕಲೆ ನಾವು ನಡ್ಸಕಾದ ಕಾರ್ಯಕ್ರಮಗಳ ಸವಾಲು ಇನ್ನೂ ಉಟ್ಟು, ಅರೆಭಾಷೆನ ಶಬ್ದ ಕೋಶ, ಲಕ್ಸಿಕೊ ಶಬ್ದಕೋಶ ಸಿದ್ಧ ಮಾಡುವ ಯೋಜನೆ, ಯೋಚನೆ ಉಟ್ಟು. ಇಷ್ಟೊತ್ತಿಗೆನೆ ಅರೆಭಾಷೆನ ವಿವಿಧ ಪ್ರಕಾರಗಳ ಹತ್ತ್ ಕೃತಿಗ ಪ್ರಕಟಿಸಿಯೊಳೊ. ಇದ್ರ ಲೋಕಾರ್ಪಣಾ ಕಾರ್ಯಕ್ರಮ, ಅಕಾಡೆಮಿನ ಪುಸ್ತಕ ಬಹುಮಾನ ಮತ್ತು ಪ್ರಶಸ್ತಿ ಪ್ರಧಾನ ಜಂಬರ ಮುಂದಿನ ದಿನಲಾ ನಡಿಯಕ್ಕುಟ್ಟು.

ಈ ಎರ್ಡನೇ ಸಂಚಿಕೆ ಸಿದ್ಧವಾಗುವಲ್ಲಿ ಸಂಪಾದಕರಾದ ಡಾ.ಪೂವಪ್ಪ ಕಣಿಯೂರು ಮುತುವರ್ಜಿಲಿ ಕೆಲ್ಸ ಮಾಡ್ಯೊಳೊ. ಅಕಾಡೆಮಿನ ಎಲ್ಲಾ ಸದಸ್ಯರ್ ಎಲ್ಲ ಕಾರ್ಯಗಳ್ಲಿ ಕೈ ಜೋಡ್ಸಿಯೊಳೊ. ಈ ಹಿಂಗಾರ ವಿನ್ಯಾಸಗೊಳಿಸಿ ಪ್ರಿಂಟ್ ಮಾಡುವಲ್ಲಿ ಮಂಗಳೂರಿನ ಆಕೃತಿ ಪ್ರಿಂಟ್ಸ್‌ನೊವು ಸಹಕರಿಸಿಯೊಳೊ. ಹಾಂಗೆನೆ ಹಿಂಗಾರಕ್ಕೆ ಸದಸ್ಯರಾಗಿ ಪ್ರೀತಿಲಿ ಕೊಂಡು ಓದುವ ಅಭಿಮಾನಿಗಳಾದ ನಿವುಗೆಲ್ಲ ನನ್ನ ಹೃದಯ ತುಂಬಿದ ಧನ್ಯವಾದಗಳನ್ನು ತಿಳ್ಸ್‌ತ್ತಾ ಒಳೆ.

20–01–2016 **ಕೊಲ್ಯದ ಗಿರೀಶ್**

## ಸಂಪಾದಕೀಯ

ಅನೇಕ ಜನ ಅರೆಭಾಷೆಂತೇಳುವ ಭಾಷೆ ಒಂದು ಉಟ್ಟಾಂತ ಕೇಳ್ದುಟ್ಟು. ಈ ಪ್ರಶ್ನೆ ಯಾಕೆಂತೇಳ್ರೆ ಅರೆ ಭಾಷೆ ಶತಮಾನಗಳ್ಂದ ಅಸ್ತಿತ್ವಲಿದ್ದ್ ಅದನ್ನಾಡುವ ಜನ ಇದ್ದರೆನೂ ಅವು ಆಗ್ಲಿ ಆವರ ಭಾಷೆ ಆಗ್ಲಿ ಹೊರನಾಡ್‌ಲಿ ಗುರುತಿಸಿಕೊಳ್ಳೊಕುಂತ ಹೋತ್ಲೆ. ಇದರಂದಾಗಿ ಬೇರೆ ಜನ ಈ ಪ್ರಶ್ನೆನ ಕೇಳ್ವಂವಾಂಗೆ ಆಗುಟು. ಹೀಂಗಿರ್ದಕ್ಕೆ ಈ ಭಾಷೆನ ಮಾತಾಡುವ ಜನ ಕರಾವಳಿ ಕರ್ನಾಟಕಲಿ ತುಳುನಾಡ್‌ಂತೇಳ್ವ ಪ್ರದೇಶ್‌ಲಿ ಮೂಲಂದ ಇದ್ದೊವು ಅಲ್ಲ. ಅವು ಬಯಲ್ ಸೀಮೆ ಕಡೆಂದ, ಮುಖ್ಯವಾಗಿ ಹಾಸನದ ಐಗೂರುಂತೇಳ್ವ ಕಡೆಂದ ಘಟ್ಟ ಇಳ್ದ್ ಬಂದೊವು. ಹಾಂಗೆ ಗಟ್ಟ ಇಳ್ದ್ ಬಂದೊವು ಆ ಭಾಷೆನ ಸುಬ್ರಹ್ಮಣ್ಯ, ಪುತ್ತೂರು, ಸುಳ್ಯ, ಹಾಂಗೆನೆ ಕೊಡಗ್ ಪ್ರದೇಶಲಿ ನೆಲೆ ನಿತ್ತ್ ಪಸರಿಸ್ಯೊಳೊ. ಇದರ್‌ಂದಾಗಿ ಅನ್ಯ ಭಾಷೆವುನೂ ಈ ಪ್ರದೇಶಲಿ ಈ ಭಾಷೆನ ಮಾತನಾಡುವಾಂಗೆ ಆತ್ . ಈಗ ಅರೆಭಾಷೆಗೊಂದು ಅಕಾಡೆಮಿ ಬಂದ ಮೇಲೆ ಈ ಭಾಷೆನ ಪರಿಚಯ ಉಳ್ಳೊವುಕೂ ಆಗುವಾಂಗೆ ಆತ್.

"ಭಾಷೆಂತೇಳುವ ಬೊಳ್ಪು ಇತ್ಲೆಂತೇಳ್ರೆ ಇಡೀ ಜಗತ್ತ್ ಕತ್ತಲೆಲಿ ಇರ್ತಿತ್ತ್". ಇದ್ ಸಂಸ್ಕೃತದ ಮಹಾ ವ್ಯಾಕರಣ ಪಂಡಿತ ದಂಡಿ ಹೇಳ್ದ ಮಾತ್. ಭಾಷೆ ಬೊಳ್ಪು ಇದ್ದಂಗೆ. ಮ್ಯೊಂಸನ ಒಳ ಮನ್ಸ್‌ನ ಭಾವನೆಗ ಹೇಳಿಕೆ ಆವಂಗೆ ಆತ್ಲೆಂತೇಳಿರೆ ಅಂವ ಏನ್ ಮಾಡಿಕೆ ಸಾದ್ಯ? ಅಂವ ಒದ್ದಡೊಕು ಅಷ್ಟೆ. ಹಂಗಾಗಿ ಭಾಷೆಂತೇಳ್ದು ಮ್ಯೊಂಸಂಗೆ ದಾರಿ ತೋರ್‍ಸುವ ಬೊಳ್ಪು .ಭಾಷೆ ಇಲ್ಲದೆ ಅಂವಂಗೆ ಜೀವನದ ಊಟ–ಆಟ–ಪಾಠ, ವಾಸ–ಮೈಮಾಟ ಹೀಂಗೆ ಸಂಸ್ಕೃತಿನ ಭಿನ್ನ ಆಯಾಮಗಳ ಅಭಿವ್ಯಕ್ತಿಸಿಕೆ ಸಾದ್ಯ ಆತ್‌ತ್ತಿತ್ಲೆ. ಒಟ್ಟಾರೆ ಭಾಷೆ ಇಲ್ಲರೆ ಮ್ಯೊಂಸ ಈ ಪ್ರಪಂಚಲಿ ಬೊದ್ಕಿಕೆ ಸಾಧ್ಯನೇ ಇಲ್ಲೆ. ಅರೆಭಾಷೆ ಹೊರಗೆಂದ ಬಂದ ಭಾಷೆ ಆದರ್ ಅದ್ ತುಳು ಭಾಷೆನೊಟ್ಟಿಗೆ ಪೊರ್ಬಿಕ್ಯಂಡ್ ಸಾಯದೆ ಬೊದ್ಕಿಟು. ತುಳು ಸಂಸ್ಕೃತಿನ ಛಾಯೆನ ಸ್ವೀಕರಿಸಿ ಆ ಸಂಸ್ಕೃತಿನೊಟ್ಟಿಗೆ ಬೆರ್ತುಟು. ನಿಜ ಆದರ್ ಅದ್ ಪ್ರತ್ಯೇಕೆಂಬಾಂಗೆ ಗುರುತಿಸಿಕೊಂಬಷ್ಟ್ ಜೀವಂತವಾಗಿಟ್ಟು.

ಅಕಾಡೆಮಿನ ಈ ಎರ್ಡ್‌ನೆ ಸಂಚಿಕೆ ಹಿಂಗಾರನ ಅಕ್ಟೋಬರ್ ನವಂಬರ್ ಮತ್ತು ಡಿಸೆಂಬರ್ ತಿಂಗಳ್‌ಗೆ ಸಂಬಂಧಿಸಿದಾಂಗೆ ರೂಪಿಸಿ ನಾವ್ ನಿಮ್ಮ ಎದ್ರ್ ಇಸ್‌ತಾ ಒಳೊ. ಅರೆಭಾಷೆವು ಈ ಅವಧಿಲಿ ಮನೆ ಮನೆಲಿ ಹೊಸತೂಟ ಆಚರಿಸ್ಯೊಳೊ. ಬಲೀಂದ್ರನ ಕರ್‍ದೊಳೊ. ಬೆನ್ನಿ ಬೇಸಾಯ ಮುಗ್ಸಿಯೊಳೊ. ಕೈಲ್ ಮುಹೂರ್ತಲಿ ಕೋಲು ಬೀಸಿ ಕುಣ್ದೊಳೊ. ನಿರ್ನಾಲ್ ತಿಂಗ, ಬೆಣ್ತಿಂಗ, ಜಾಳ್ತೆ ತಿಂಗಳ ಈ ಕಾಲಲಿ ನಾವ್ ಅಕಾಡೆಮಿನ ಆಶ್ರಯಲಿ ಹಾಂಗೆ ನೇರ ಅಕಾಡೆಮಿನೇ ಹಲವು ಕಾರ್ಯಕ್ರಮಗಳ ಹಮ್ಮಿಕೊಂಡುಟು. ಅಕಾಡೆಮಿನ ಉದ್ದೇಶಲಿ ಅರೆ ಭಾಷೆ ಸಂಸ್ಕೃತಿ ಹಾಂಗೆ ಸಾಹಿತ್ಯನ ಉಳ್ಸುವ, ಬೆಳ್ಸುವ ಕಾರ್ಯಕ್ರಮ ಮುಖ್ಯ. ಈ ದೃಷ್ಟಿಲಿ ನಾವು ಅರೆಭಾಷೆನ ಸಾಂಸ್ಕೃತಿಕ ಸಮಾವೇಶದೊಟ್ಟಿಗೆ ಸಮಕಾಲೀನ ಸಾಹಿತ್ಯ ಹಾಂಗೆ ಸಮಾಜಿಕ ಹಿನ್ನೆಲೆಲಿ ವಿಚಾರಗೋಷ್ಠಿನ ಕೂಡ ನಡ್‌ಸ್ಯೊಳ. ಈ ದೃಷ್ಟಿಲಿ ಪುತ್ತೂರುಲಿ ನಡ್ಸಿದ ಜಂಬರ ಗಮನೀಯಯವಾಗುಟು. ಕೊಡ್ಗ್ ಭಾಗದ ಅರೆಭಾಷೆ ಸಮುದಾಯದ ಸಾಂಸ್ಕೃತಿಕ ಮಿಲನ ಚೇರಂಬಾಣೆಯಲ್ಲಿ ಬಾರಿ ಪೊರ್ಲುಲಿ ನಡ್ದುಟು. ನವದೆಹಲಿಲಿ ನಡ್ದ ಅರೆಭಾಷೆ ಸಮಾವೇಶ ಅನ್ಯ ಭಾಷೆಗಳೊಟ್ಟಿಗೆ ಬೆರ್ತ್ ಜನಮನ್ನಣೆ ಗಳ್ಸಿಟು. ಮಂಗಳೂರ್‌ನ ಪಿಲಿಕುಳ ನಿಸರ್ಗಧಾಮಲಿ ನಡ್ಸಿಕೊಟ್ಟ ಸಾಂಸ್ಕೃತಿಕ ಪ್ರದರ್ಶನ ಭಾರಿ ಮೆಚ್ಚುಗೆ ಪಡ್ದುಟು. ಇಲ್ಲಿ ಪ್ರದರ್ಶನ ಆದ ಹೆಜ್ಜೆ ಗೆಜ್ಜೆ ರೂಪಕ ಅರೆಭಾಷಿಕ ಸಮುದಾಯದ ವಲಸೆ ಪ್ರಕ್ರಿಯೆನ  ಇತಿಹಾಸ ಕಣ್ಮುಂದೆ ಇಸಿ ಅದರ ಮಹತ್ವನ ಪ್ರಚಾರ ಪಡ್‌ಸ್ಯೊಳೊ.

ನಾವು ಸುರುನ ಸಂಚಿಕೆ ರೂಪಿಸಿಕಾಕನ ಬರಹಗಳ ಯಾರ್ ಬರ್ದುಕೊಡುವೊ, ಕೊಟ್ಟದರ ಪ್ರಕಟಿಸಿರೆ ಯಾರ್ ಓದುವೊ? ಎಂದ್ ಅಳ್ಕಿದ್ದೊ. ಸಂಚಿಕೆ ಪ್ರಕಟ ಆಗಿ ಕೆಲವೇ ದಿನಗಳ್ಲಿ ಪ್ರತಿಗ ಮಾರಾಟ ಆಗಿ ಹೋತ್. ಇದ್ ನಾವ್ಗೆ ಈ ಎರ್ಡ್ನೇ ಸಂಚಿಕೆ ರೂಪಿಸಿಕೆ ಧೈರ್ಯ ಕೊಟ್ಟಿತ್. ಈ ಸಂಚಿಕೆಗೆ ಬಹಳ ಜನ ಬರಹಗಾರರ್  ರೂಪಕ, ಕಥೆ ಕವನ, ವಿಚಾರ, ವೈಚಾರಿಕ, ವಾಸ್ತು, ಅಡುಗೆ, ವೈದ್ಯ ಹಿಂಗೆ ಹಲವು ಪ್ರಕಾರಗಳ ಕಳ್ಸಿಕೊಟ್ಟ್ ಪ್ರಕಟಿಸಿಕೆ ಅನುವು ಮಾಡಿಕೊಟ್ಟೊಳೊ.

ಹಿಂಗಾರಕೆ ಬರೇ ಸಿದ್ಧ– ಪ್ರಸಿದ್ಧ ಪ್ರಕಾರಗಳೇ ಸಾಕಾದುಲೆ. ನಾವ್ ವರ್ತಮಾನದ ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ, ತಲ್ಲಣಕೆನೂ ಮುಖ ಮಾಡ್ದು ಮುಖ್ಯ ಆದೆ. ಅಂತಹ ಲೇಖನಗಳು ನಮ್ಮ ಹಿಂಗಾರ ಸಂಚಿಕೆಲಿ ಬರೋಕುಂತ್ಹೇಳ್ವ ಅಂಬೆರ್ಪು ಉಟ್ಟು, ಈ ದೃಷ್ಟಿಲಿ ನಮ್ಮ ಅರೆಭಾಷಿಕ ಬರಹಗಾರರ್ ಯೋಚನೆ ಮಾಡ್ವ ಅಗತ್ಯ ಉಂಟುಂತ ನಾವ್ಗೆ ಅನ್ನಿಸ್‌ತಾ ಉಟ್ಟು. ಮುಂದೆನ ಸಂಚಿಕೆಗೆ ಈ ಬಗೆಯ ಬರಹಗ ಹೆಚ್ಚೆಗೆ ಬರ್‍ವೊಂತ ನಾವು ಭಾವಿಸ್ತೊಳೊ.

ಈ ಸಂಚಿಕೆಲಿ ಸರಕಾರ ಕಲ್ಪಿಸಿಕೊಟ್ಟ ಅವಕಾಶಲಿ ನಾವೇನೇನ್ ಮಾಡ್ಯೋಲೊಂತೇಳು ವಂತದರ ದಾಖಲ್ಸಿ ಇದರ ಬೇರೆವ್ಕೂ ತಿಳ್ಸುವ ಪ್ರಯತ್ನನ್ ಮಾಡ್ಯೋಳೊ. ಇಲ್ಲಿನ ಬರಹಗ ಅರೆಭಾಷೆನ ಸಾಂಸ್ಕೃತಿಕ ಸೊಗಡ್‌ನ ಸಮುದಾಯದ ಇತಿಹಾಸ, ಸಂಘರ್ಷದ ಬದ್‌ಕ್, ವಿಭಿನ್ನ ಅರಿವು–ತಿಳಿವುಗಳ ವ್ಯಕ್ತ ಮಾಡ್ವೆಯೆಂದ್ ನಮ್ಮ ಆಂಬೋಣವಾಗುಟು. ನೀವು ಈ ಸಂಚಿಕೆಲಿ ಪಾಲ್ದಾರರಾದು ಬಾಳ ಮುಕ್ಯಂತೇಳಿ ನಾವು ಭಾವಿಸ್ಯೊಳೊ. ನಂಬ್ಯೊಳೊ.

ಈ ಸಂಚಿಕೆಲಿ ಅರೆಭಾಷಿಕ ಹಿರಿಯ ಬರಹಗಾರರನ್ನು ಆದಷ್ಟು ಸೇರ್‍ಸೊಕೂಂತ ನಾವು ಶ್ರಮಿಸ್ಯೊಳೊ.

ಈ ಸಂಚಿಕೆನ ಹೊರ ತಾಕೆ ಅಕಾಡೆಮಿನ ಅಧ್ಯಕ್ಷರ್, ರಿಜಿಸ್ಟ್ರಾರ್ ಹಾಂಗೆನೆ ಸರ್ವ ಸದಸ್ಯರ್ ಸಹಕರಿಸ್ಯೊಳೊ. ಅರೆಭಾಷಿಕ ಹಿರಿಯ ಚಿಂತಕರ್, ಕವಿಗ, ಕತೆಗಾರರ್ ತಮ್ಮ ಬರಹಗಳ ಕೊಟ್ಟ್ ಈ ಸಂಚಿಕೆನ ಗೌರವ ಹೆಚ್ಚಿಸ್ಯೊಳೊ. ಸಂಚಿಕೆನ ಮುಖಪುಟ ವಿನ್ಯಾಸ ಮಾಡಿ ಪ್ರಿಂಟ್ ಹಾಕುವಲ್ಲಿ ಮಂಗಳೂರಿನ ಆಕೃತಿ ಪ್ರಿಂಟ್ಸ್‌ನ ಕಲ್ಲೂರು ನಾಗೇಶ ಶ್ರಮ ಪಟ್ಟೊಳೊ. ಅಕ್ಷರ ಜೋಡಣೆಯಲ್ಲಿ ಸುಳ್ಯದ ಚೆನ್ನಕೇಶವ ಜೇರಾಕ್ಸ್‌ನ ಶ್ರೀಮತಿ ಪುಷ್ಪಲತಾ ಎ. ಇವುನೂ ಸಹಕರಿಸ್ಯೊಳೊ. ಪ್ರತಿ ತಿದ್ದಿಕೆ ಶ್ರೀಮತಿ ಸರೋಜ ಪಿ ಕಣಿಯೂರು ಕೈ ಜೋಡ್ಸಿಯೊಳೊ. ಸಹಕರಿಸಿದ ಎಲ್ಲೊವ್ಕೆ ತುಂಬು ಕೃತಜ್ಞತೆನ ತಿಳ್ಸುವೆ.

20.01.2016 **ಡಾ. ಪೂವಪ್ಪ ಕಣಿಯೂರು**



# ಹಿಂಗಾರ ಎಸಳ್‌ಗ

**ಕವನಗ**



# ಸುರುನ ಪಿಂಗಾರ

ಎಂ.ಜಿ. ಕಾವೇರಮ್ಮ

ಹೊಂಬಾಳೆ ಒಡ್ದ್ ಪಿಂಗಾರ ಬಾತ್
ನಂಬಾಸೆ ಬರಹಾ ಬಂಗಾರ ಆತ್
ಕಾರ್ತಿಂಗ, ಆಟಿ, ಸೋಣಲಿ ಬಂದ
ಪಿಂಗಾರ ಪತ್ರಿಕೆ ಸಿಂಗಾರ ಆತ್

ಪಿಂಗಾರ ಅರ್ಳಿಟ್ಟು, ನವಿಲ್‌ನು ಕೊಣ್ದುಟ್ಟು
ಅರೆಬಾಸೆ ಹಿರ್‍ಯರ ಪರ್ಚಯನು ಉಟ್ಟು
ಒಳಪುಟದ, ಹೊರಪುಟದ ಚಿತ್ರಗ ಎಲ್ಲಾ
ನಡ್ದ ಉತ್ಸವಕೆ ಸಾಕ್ಷಿಯಾಗುಟ್ಟು.

ಅಕಾಡೆಮಿ ಲಾಂಛನ ಎದ್ದ್ ಕಂಡಾದೆ
ಮುಖಪುಟದ ವಿನ್ಯಾಸ ಮೊನ್ಸ್‌ಗೆ ಕುಸಿ ಆದೆ
ಅರೆಬಾಸೆ ಸಂಸ್ಕೃತಿ, ಕತೆಗಾ ಹಾಡ್‌ಗ
ಪಿಂಗಾರದೆಸಳ್‌ಲಿ ಎದ್ದ್ ಕಂಡಾದೆ

ಸಂಪಾದಕೀಯನು ಪೊರ್ಲ್ಲಲಿ ಬರ್ದೊಳೊ
ಅಧ್ಯಕ್ಷ, ಸದಸ್ಯರ ಪರ್ಚಯನು ಕೊಟ್ಟೊಳೊ
ಅಕಾಡೆಮಿ ನಡ್ಸಿದ ಜಂಬರದ ಗೌಜಿನ
ಜನಕೆ ಎಲ್ಲಾ ತಿಳ್ಯಕೆ ಲಾಯ್ಕ್‌ಲಿ ಬರ್ದೊಳೊ

ಪಿಂಗಾರ ಪತ್ರಿಕೆ ನೂರ್ಕಾಲ ಬಾಳಲಿ
ಬಂಗಾರದಾಂಗೆ ಪಳಪಳ ಹೊಳ್ಯಲಿ
ಅರೆಬಾಸೆ ಬೆಳ್ಯಲಿ, ಅರೆಬಾಸೆ ಉಳ್ಯಲಿ
ತಿಮ್ಮಪ್ಪ ದೇವ್ರೂ ಯಾಗೋಳು ಹರ್ಸಲಿ




ಮೂಲ : **ಪೂವಪ್ಪ ಕಣಿಯೂರು**
ಅನುವಾದ : **ಸಂಜೀವ ಕುದ್ಪಾಜೆ**

ಮನೆ ಕಟ್ಟುವಲ್ಲಿ ಜನಂಗ ಬೊದುಕ್ ಸುತ್ತ ಮುತ್ತ ಇರುವಂಗೆ ಪರಿಸರ, ಸಸ್ಯಗ್, ಪ್ರಾಣಿಗ, ಪ್ರಭಾವ ಬೀರುವೆ. ಹಾಂಗೆನೆ ಜನಂಗಳ ಹುಟ್ಟ್‌ಂದ ಆಕಿರಿನ ಮುಟ್ಟ ನಡಿವಂತ ಹುಟ್ಟ್- ಮದ್ವೆ- ಸಾವ್ ನಂಬಿಕೆ ಆಚರಣೆ ನಡಾವಳಿ ಮತ್ತೆ ಉತ್ಪಾದನ ವಿಧಾನಕ್ಕೆ ಸಂಬಂಧ ಪಟ್ಟವೆ. ಈ ಮನೆನೂ ಒಂದ್ ಭೌತಿಕ ಸಂಸ್ಕೃತಿಯಾದ್ದದೆ. ಭೌತಿಕ ಸಂಸ್ಕೃತಿ ರೂಪು ಪಡ್ಯಕನ ಅದರ್‍ಲಿ ಬದ್ಕ್‌ವವರ ಮನ್ಸ್‌ನ ಹಾಂಗೆ ಮನೆನೂ ಇದ್ದದೆ. ಇದ್ ಅವರ ಸಾಮಾಜಿಕ, ರಾಜಕೀಯ ಆಡಳ್ತೆ, ಆರ್ಥಿಕ, ಧಾರ್ಮಿಕ ಮಟ್ಟನ ತೊರ್‍ಸಿದೆ.

ಕರ್ನಾಟಕದ ಸಮುದ್ರ ಕರೆದ ದ.ಕ ಮತ್ತು ಕೊಡ್ಗ್ ಜಿಲ್ಲೆಲಿ ಒಂದ್ ಸೀಲಿನ, ಎರ್ಡ್ ಸೀಲಿನ ಮನೆಗ, ಸಾಮಾನ್ಯ ಮನೆಗಳ ಹೊರತುಪಡ್ಸಿದಂತೆ ಜಾತಿ, ಅಧಿಕಾರ, ಅಂತಸ್ತು, ಸಂಪ್ರದಾಯದ ಹಿನ್ನೆಲೆಲಿ ಗುರ್ತಿಸುವ ಮನೆನ ಐನ್ಮನೆಂತ ಕರ್‍ದವೆ. ಇಂದ್ ದಕ್ಷಿಣ ಕನ್ನಡ ಜಿಲ್ಲೆಂತೇಳಿ ಕರೆಸಿಕಂಬ ಪಂಡ್ ತುಳುನಾಡ್‌ಂತ್ ಹೇಳ್ತಿದ್ದ ಪ್ರದೇಶಲಿ ಗ್ರಾಮ ನೆಲೆಲಿ ಅಧಿಕಾರ ಸ್ಥಾನಲಿ ಬೂಡು ಬಲ್ಲಾಳರ್ ಇದ್ದೊ. ಭೂಮಿನ ಧನಿಗಾಗಿದ್ದ ಇವರ ಒಕ್ಕಲ್‌ಗಂದ್ ಗೇಣಿ ವಸೂಲು ಮಾಡಿಕೆ ಕೆಲವು ಮನೆಗಿದ್ದೊ. ಅವರ ಗುತ್ತುನವುಂತ ಕರ್‍ಯೆತಿದ್ದೊ ಇವರ ಮನೆ ಮಾಮೂಲು ಮನೆಂದ ಬೇರೆ ಆಗಿರಿತ್ತಿತ್. ಅಂದ್ ಗುತ್ತು/ಪಡ್ಡುನ ಮನೆಂತೇಳಿ ಕರ್‍ಯೊತಿದ್ದೊ. ಡಿಕ್ಲೆರೇಷನ್ (ಭೂ ಸುಧಾರಣೆ ಕಾನೂನು) ಬಂದ ಮೇಲೆ ಈ ಮನೆಗೆಲ್ಲ ಈಗ ಕಾಂಬಕೆ ಬಾರಿ ಅಪರೂಪ. ಗುತ್ತು ಮನೆನೆ ಕಲ್ಪನೆ ಇದ್ದರೂ ಅದ್ ಈಗ ಹೊಸ ಮನೆಗಳಿಗೆ ಸ್ಥಾನಾಂತರ ಆಗುಟು. ಅರಭಾಸೆಗೌಡರ್ ಐನ್ಮನೆ ಮಾತ್ರ ಸಂಸ್ಕೃತಿ ಉಳ್ಸೊಕೂಂತ

ಹೇಳುವ ಜಾಗ್ರತೆಂದ ಈ ಮನೆಗ ಈಗಲೂ ಕಾಂಬಕೆ ಸಿಕ್ಕುವೆ. ಹಾಂಗೆಂತ ಐನ್ಮನೆಲಿ ಕುಟುಂಬದವು ಒಕ್ಕಲ್ ಇಲ್ಲೆ. ಜಾಗೆ ಎಲ್ಲ ಪಾಲಾಗಿ ಮೊನ್ಸರೆಲ್ಲ ಉದ್ಯೋಗಂತೇಳಿ ಹರಾಂತ್ರಿ ಆಗಿ ಹೋಗೊಳೊ. ಎಲ್ಲವೂ ಬೇರೆ ಬೇರೆ ಮನೆ ಮಾಡಿಕಂಡ್ ಇದ್ದಂಗೆ ಹಬ್ಬ ಹರಿದಿನಂತೇಳಿ ಸಾಂಸ್ಕೃತಿಕ ಆಚರಣೆಗೆಲ್ಲ ಎಲ್ಲವೂ ಒಟ್ಟಾಗಿ ಐನ್ಮನೆಲಿ ಸೇರುವೆ.

ಗೌಡ್ರ ಮನೆತನಕ್ಕೆ ಸೇರ್ದ ಐನ್ಮನೆಗ ಬೇರೆ ಬೇರೆ ಹೆಸರ್ಲಿ ನಾಲ್ಕಂಕಣದ ಮನೆ, ಗುತ್ತುನ ಮನೆಂತೇಳಿ ಕರ್ದವೆ. ಈ ಮನೆ ಆಸ್‌ಪಾಸ್‌ನ ಊರ್ಗೆ ಸೇರ್ದ ಮುಖ್ಯಪಟ್ಟ ಮನೆಂತೇಳಿ ಕರ್ದವೆ.

ಐನ್ಮನೆಗ ರಚನೆ ನೋಡಿಕೆ ತುಂಬಾ ಪೊರ್ಲುಂದ ವೈಶಿಷ್ಟ್ಯವಾಗಿ ಕಂಡದೆ. ಐನ್ಮನೆಗ ಸುಮಾರ್ ಮೂರ್ ಅಡಿ ಎತ್ತರದ ಪಂಚಾಂಗದ ಮೇಲೆ ಇದ್ದದೆ. ಮನೆ ಬಾಗ್ಲ್ ಮೂಡ್ ದಿಕ್ಕಿಗೆ ಇದ್ದದೆ. ಮೂರ್ ಅಡಿ ಅಗಲದ ಜಗಲಿಂದ ಐನ್ಮನೆ ಸುರು ಆದೆ. ಜಗಲಿ ಮತ್ತೆ ಚಾವಡಿನ ಮೂಡುಲಿ ಒಂದ್ ಅಡಿನಷ್ಟ್ ಅಗಲದ ಚಿಂಟೆ ಇದ್ದದೆ. ಇದರ ಮರದ ಹಲಗೆಂದ ಹಾಸಿ ಅದರ ಮೇಲೆ ಕೆತ್ತನೆ ಕೆಲ್ಸದ ಬೋದಿಗೆಂತ ಹೇಳ್ವ ಗಂಬಗ ಇದ್ದವೆ. ಒಟ್ಟುಲಿ ಈ ಜಾಗೆನ ಅರೆಭಾಷೆ ಮಾತಾಡ್‌ವ ಗೌಡ್ರಗ 'ಐಮರ್‌ಂತೇಳಿ ಕರ್ದವೆ. ತುಳು ಭಾಷೆ ಮಾತಾಡ್‌ವ ಗೌಡ್ರಗ್ 'ಬಾಜಿರಂತೇಳಿ ಕರ್ದವೆ. ಇದರ ಮೇಲೆ ಕುದ್ದವೆ. ಜಗಲಿನ ಬಲ್ದಗೆ ನ್ಯಾಯಕಟ್ಟೆ ಇದ್ದದೆ. ಇಲ್ಲಿ ಊರ್‌ನ ನ್ಯಾಯ ತೀರ್ಮಾನ ಆದೆ. ಇಲ್ಲಿ ಊರ್‌ನ ನ್ಯಾಯ ತೀರ್ಮಾನಗಳ ದೈವದ ಪ್ರತಿನಿಧಿಯಾಗಿ ಮನೆನ ಕರ್ತ ಮಾಡ್ದೆ. ಈ ಕಟ್ಟೆನ ಕರ್ತ ಮಾತ್ರ ಬಳ್ಸಿಕಣಕ್. ಮನೆನ ಎಡ್ಡಗೆ ಪೂರ್ವಾಗ್ನೇಯ ದಿಕ್ಕ್‌ಲಿ ಮನೆನ ಧರ್ಮದೈವದ ಸ್ಥಾನ ಇದ್ದದೆ. ತುಳುನವು ದೈವ ಆರಾಧಕರ್ ಹಾಂಗಾಗಿ ಸ್ಥಾನ ಇದ್ದೆ ಇರೊಕು. ಇದರ ಬಾಗ್ಲ್ ಜಗಲಿಗೆ ಮೊರೆ ಮಾಡಿ ಇದ್ದದೆ.

ಐಮರ್‌ನ ದಾಟಿರೆ ಸಿಕ್ಕುದೆ ಮುಖ್ಯಪಟ್ಟ ಚಾವಡಿ. ಇಡಿ ಮನೆಗೆ ಕಾರ್ಯಸ್ಥಾನ ಇದೇ ಚಾವಡಿ. ಚಾವಡಿನ ಗೋಡೆಗೆ ದೈವ ದೇವರುಗಳ, ಹಿರಿಯರ ಪಟನ ತೂಗಿದ್ದವೆ. ಲಾಯಿಕ್ಕಿನ ಕೆತ್ತನೆ ಮಾಡ್ದ ಮರಗಳಂದ್ ಚಾವಡಿನ ವಿನ್ಯಾಸ ಮಾಡುವೆ. ಪಂಡ್‌ನ ಕಾಲದ ಕುದ್ರುವ ಕುರ್ಸಿಗ, ಮೇಜಿಗ, ಮಂಚಗ ಎಲ್ಲ ಇದ್ದವೆ. ನ್ಯಾಯಕಟ್ಟೆ ಇಲ್ಲದ ಐನ್ಮನೆಲಿ ಚಾವಡಿನೆ ತೀರ್ಮಾನ ಜಾಗೆ. ಸೂತಕದವು ಈ ಚಾವಡಿಗೆ ಹೋಕೆ ಇಲ್ಲೆ. ಚಾವಡಿಂದ ಒಳಾಂಗಣಕ್ಕೆ ಬಾಕೆ ತಗ್ಗ್‌ನ ಬಾಗ್ಲ್ ಇದ್ದದೆ. ಬಾರಿ ಸೋಕುನ ಕೆತ್ತನೆ ಕೆಲ್ಸದ ದಾರಂದ ಇರುವ ಬಾಗ್ಲ್ ಇದ್ದದೆ. ಚಾವಡಿಂಗ ಅರ್ಧ ಅಡಿ ತಗ್ಗ್‌ಲಿ ಒಳಾಂಗಣ ಇದ್ದದೆ. ಇದ್ ಸುಮಾರ್ ಆರ್ ಅಡಿನಷ್ಟ್ ಅಗಲದ ಜಗಲಿಯಾಗಿದ್ದ್, ಇದರ ಒಳಾಂಕಣಂತೇಳೀ ಕರ್ದವೆ. ಇದ್ ಚೌಕ ಆಕಾರಲಿದ್ದ್ ಎಲ್ಲಾ ಕೋಣೆಗಳ ಸೇರ್ಸುವ ಕೆಲ್ಸ ಮಾಡ್ದೆ.

ಚಾಪಡಿಂದ ಬಲ್ದ್‌ಗೆ ತಿರ್ಗಿರೆ ಕುಲದೈವದ ಕೋಣೆ ಇಲ್ಲಿ ಮುಡಿಪು ಇದ್ದದೆ (ಮುಡಿಪು ತಿರುಪತಿ ತಿಮ್ಮಪ್ಪಂಗೆ ಈಡ್ ಕಟ್ಟಿದ ಹರ್ಕೆ) ಹರಿಸೇವೆ ಇಲ್ಲೆ ನಡ್ದದೆ. ಪಕ್ಕಲಿ ದೈವದ ಬಂಡಾರ ಇದ್ದದೆ. ಈ ಕೋಣೆನ ಪಕ್ಕಲಿ ಪಡ್ಡಕೆ ಹೊರಗೆ ಹೋವ ಬಾಗ್ಲ್ ಇದ್ದದೆ. ಹಕ್ಕಲೆ ಕತ್ತಲೆ ಕೋಣೆ ಇದ್ದದೆ. ಕಿಟಕೆ ಇಲ್ಲದ ಈ ಕೋಣೆಲಿ ಮನೆನ ನಗ, ನಾಣ್ಯ ಮತ್ತೆ ದಾಖಲೆ

ಕಾಗ್ದಗಳ ಇಸಿದ್ದವೆ. ಕತ್ತಲೆ ಕೋಣೆನ ಹಕ್ಕಲೆ ಪಾಷಾಣ ಮೂರ್ತಿಂತೇಳುವ ಹೆಣ್ಣ್ ದೈವದ ಕೋಣೆ ಇದ್ದದೆ. ಇದರ್ಲಿ ಆ ದೈವಕ್ಕೆ ಸಂಬಂದಪಟ್ಟ ಸಾಮಾನ್ ಇದ್ದದೆ. ಸುತ್ತಮುತ್ತ ಕೋಣೆಗಳಂದ ಸೇರುವ ಐನ್ಮನೆನ ವಾಯುವ್ಯ ದಿಕ್ಕಿಗೆ ಇರುವ ಕೋಣೆ ಅಡ್ಗೆ ಮಾಡುವ ಕೋಣೆ. ಇದ್ ಆಗ್ನೇಯ ದಿಕ್ಕಿಲಿ ಆಯಕಟ್ಟ್‌ನ ಜಾಗೆಲಿರುವ ಕನ್ನಿಮೂಲೆಗೆ ಸರಿ ವಿರುದ್ಧ ದಿಕ್ಕಿಲಿ ಇದ್ದದೆ. ಈ ಮನೆನ ಪಾಯದ ಲೆಕ್ಕಾಚಾರ ಸುರು ಆದು ಈ ಕನ್ನಿಮೂಲೆಂದಲೇ ವಾಸ್ತು ದೃಷ್ಟಿಂದ ಕನ್ನಿಮೂಲೆ ಮನೆನ ಮುಖ್ಯ ಪಟ್ಟ ಭಾಗ ಆಗಿ ಕಾರ್ಯನಿರ್ವಹಿಸಿದೆ.

ಗೌಡ್ರರ ಐನ್ಮನೇಲಿ ಜಗಲಿಲೆ ಹೆಚ್ಚಿನ ಕಾರ್‌ಬಾರ್ ನಡ್ದದೆ. ಎರಡನೆದ್ ಅಡ್ಗೆಮನೆ. ಇದರ್ಲಿ ಮೂಡಕೆ ಮೊರೆ ಮಾಡಿ ಕೆತ್ತನೆಂದ ಕೂಡ್ದ ಮರದ ಸಣ್ಣ ಕಂಬ ಹಾಕಿದ್ದವೆ. ಇದರ ಕನ್ನಿಕಂಬ ಅಂತ ಕರ್ದವೆ. ಹುಟ್ಟ್ ಸಾವ್‌ನ ಮತ್ತೆ ಎಡೆಲಿ ನಡಿವ ಎಲ್ಲಾ ಜಂಬರಗ ಈ ಕಂಬದ ಬುಡಲಿ ನಡ್ದದೆ. ಗುರುಕಾರ್ಣರಿಗೆ (ಹಿರಿಯವುಕ್ಕೆ) ಇಲ್ಲಿ ಅಗೆಲ್ ಹಾಕಿ ಬಡ್ಸ್‌ದು . ಈ ಕನ್ನಿಕಂಬ ಅರೆಭಾಷೆ ಗೌಡ್ರ ಐನ್ಮನೆಲಿ ಸರ್ವೇಸಾಮಾನ್ಯ. ತುಳು ಭಾಷೆ ಮಾತಾಡುವ ಗೌಡ್ರಲಿ ತುಂಬಾ ಅಪರೂಪ. ಕನ್ನಿಕಂಬ ಇಲ್ಲದಲ್ಲಿ ಎಲ್ಲ ಜಂಬರಗ ಅಡ್ಗೊಳಗೆ ನಡ್ದದೆ. ಅಡ್ಗೆ ಕೋಣೆ ಹಕ್ಕಲೆ ಬಡಗ್ ಭಾಗಕ್ಕೆ ಹೊರಗೆ ಹೋವ ಬಾಗ್ಲ್ ಇದ್ದದೆ. ಪಕ್ಕಲಿ ತುಂಬಾ ಜಾಗೆ ಇರುವ ಉಂಬ ಕೋಣೆ ಇದ್ದದೆ. ಇದರ ಉಂಬೊಳಗೆಂತ ಕರ್ದವೆ. ಈ ಉಂಬೊಳಗೆನ ಹಕ್ಕಲೆನೆ ಒಂದ್ ಕೋಣೆ ಇದ್ದದೆ ಅದೇ ಸರ್ಕ್‌ನ ಕೋಣೆ. ಇಡೀ ಐನ್ಮನೆನ ಕಿಟಕಿ ಬಾಗ್ಲ್ ದಾರಂದಗೆಲ್ಲ ಸಣ್ಣದಾಗಿದ್ದ್ ಎಲ್ಲವೂ ಬೊಗ್ಗಂಡೆ ಮನೆ ಒಳಗೆ ಹೋಕು. ಗೌಡ್ರ ಮನೆಗೂ ದೈವದೇವರ ಮರ್ಯಾದಿ ಕೊಟ್ಟವೆ.

ನಡು ಅಂಗಣಂದ್ ಸುಮಾರ್ ಎರ್ಡ್ ರಂದ್ ನಾಕ್ ಅಡಿನಷ್ಟ್ ತಗ್ಗ್‌ನ ಅಂಕಣ ಇದ್ದದೆ. ಇದ್ ತೊಟ್ಟಿನಾಂಗೆ ಇದ್ದ್ ಚೌಕಾಕರಲಿ ಇದ್ದದೆ. ಕೆಲವು ಮನೆಗ ಆಯತಾಕಾರಲಿ ಇದ್ದವೆ. ಈ ಅಂಕಣದ ನಾಕ್ ಮೂಲೆಗೆ ಬೋದಿಗೆ ಕಂಬ ಇದ್ದವೆ. ಬೋದಿಗೆ ಕಂಬದ ಮೇಲೆಂದ ಮನೆನ ಮಾಡ್ ಹೊಂದಿಕಂಡ್ ಇದ್ದರೆ ನಾಲ್ಕ್ ಮೂಲೆಂದ ಮನೆನ ಮಾಡ್‌ನ ನೀರ್ ಈ ತೊಟ್ಟಿಗೆ ಹರ್ದ್ ಬಂದದೆ. ಬಿದ್ದ ನೀರ್ ಕೊಳವೆಂದ ಈಶಾನ್ಯ ದಿಕ್ಕಿಗೆ ಹರ್ದ್ ಹೋವ ವ್ಯವಸ್ಥೆ ಇದ್ದದೆ.

ಇಲ್ಲಿ ವಿವರ್ಸಿದ ಮನೆನ ಅರೆಭಾಷೆವು 'ನಾಲ್ಕ್ ಸೂತ್ರದ ಮನೆ ನಾಲ್ಕಂಕಣದ ಮನೆಂತೇಳಿ ಕರ್ದವೆ. ತುಳು ಭಾಷೆವು 'ಉಳಮುಂದಿಲು (ಒಳ ಅಂಗಳ) ಮನೆಂತೇಳಿ ಪ್ರತ್ಯೇಕ ಕರ್ದ್ ಗುರುತ್ತಿಸುವೆ. ಹೀಂಗೆನೆ ರಚನೆ ಹೊಂದಿಕಂಡ್ ಎರಡ್ ಇದ್ದರೆ ಎಂಟ್ ಸೂತ್ರದ ಮನೆಂತೇಳಿ ಕರ್ದವೆ. ಇದ್ ಮನೆನ ಯಥಾವತ್ತಾದ ಘಟಕಗಳ್‌ಂದ್ ಕೂಡಿದ್ದದೆ. ದೈವ ದೇವರ್ ಸ್ಥಾನಗ ಇರ್ದುಲೆ. ಅದರ್ಲಿ ಮನೆ ಮಂದಿಯೆಲ್ಲ ವಾಸ ಮಾಡ್ವೆ. ಈ ಎಂಟ್ ಸೂತ್ರದ ಮನೆಲಿ ಅಡ್ಗೆ ಕೋಣೆ ಒಂದೇ ಇದ್ದ್ ಇಲ್ಲಿ ಮನೆವೆಲ್ಲವೂ ಒಟ್ಟಿಗೆ ಕುದ್ದ್ ಉಂಡವೆ

ಬಯಲುಸೀಮೆನ ತೊಟ್ಟಿ ಮನೆನ ಮಾಡ್ದ ರೀತಿ ಹೊರಗೆಂದ ನೋಡಿಕೆ ಅರಸರ ಅರಮನೆನ ರೂಪಲಿ ಇದ್ದರೂ ಇವು ಮುಖ್ಯವಾಗಿ ಅವು ಮಾಡಿಕಂಡ್ ಬಂದ ಕೆಲ್ಸಕೆ ಹೊಂದಿಕಂಡ್ ರಚನೆ ಆದಂತದ್. ಮುಖ್ಯಪಟ್ಟ ಬತ್ತದ ಬೆಳೆ ಮತ್ತೆ ಜಾನುವಾರ್ ಸಾಕಾಣೆನ

ದೃಷ್ಟಿಂದ ನೋಡ್‌ಕನ ಇದ್ ಸ್ಪಷ್ಟವಾಗಿ ಕಂಡದೆ. ಐನ್ಮನೆ ಒಳಗೆ ತೊಟ್ಟಿಗಳ ನೋಡ್ರೆ ಇದ್ ಬಯಲ್ ಸೀಮೆ ತೊಟ್ಟಿ ಮನೆಗಳ ಸಣ್ಣ ರೂಪಗಂತೇಳಿ ಗೊತ್ತಾದೆ. ಹಾಂಗೆ ತೊಟ್ಟಿ ಮನೆನೆ ಐನ್ಮನೆ ಅಲ್ಲ. ತುಳುನಾಡಿಗೆ ಘಟ್ಟದ ಮೇಲ್‌ಂದ ಬಂದ ಗೌಡ್ರ ಮೂಲದ ಕಡೆಗೆ ನೋಡ್ರೆ ಐನ್ಮನೆ ರಚನೆಗೆ ತೊಟ್ಟಿ ಮನೆಗಳ ಪ್ರಭಾವ ಆದ್ ಕಂಡ್ ಬಂದದೆ. ಹಾಸನದ ಐಗೂರ ಸೀಮೆಂದಾಗಿ ಹಳೆ ಮೈಸೂರ್ ಭಾಗಂದ್ ದಕ್ಷಿಣಕನ್ನಡಕ್ಕೆ ಇಳ್ಡ್ ಬಂದ ಗೌಡ್ರಗ ಇಲ್ಲಿನ ಪ್ರದೇಶಕ್ಕೆ ಮತ್ತು ಆ ಪರಿಸರಕ್ಕೆ ಹೇಂಗೆ ಬೇಕು ಹಾಂಗೆ ಹೊಂದಿಸಿ ಕಟ್ಟಿರುವ ಸಾಧ್ಯತೆ ಉಟ್ಟು.

ರಚನೆ ದೃಷ್ಟಿಂದ ನೋಡ್ರೆ ಗೌಡ್ರ ಐನ್ಮನೆಗ ಅವರ ಸಂಸ್ಕೃತಿಗೆ ಅನುಗುಣವಾಗಿ ಹೊಂದ್ಸಿಕಂಡ್ ಕಟ್ಟ್ಯೊಳ. ನಾಲ್ಕಂಕಣ ಇಲ್ಲರೆ ಐನ್ಮತೆಂಳ್ಡು ಕುಲದೈವ, ಮನೆದೈವ, ಸತ್ತ ಮೇಲೆ ಕೊಲೆಗಾದ (ಗುರುಕಾರ್ಣವರು) ಹಿರಿಯರ ಸ್ಥಾನಗಂಳ್‌ಂದ ಕೂಡಿ ಕುಟುಂಬಕರ್ತನ (ಯಜಮಾನನ) ಮುಂದಾಳತ್ವಲಿ ಕುಟುಂಬಸ್ಥರ್ ಬದ್ಕುವ ಮನೆ. ಈ ಐದ್ ಅಂಶಗಳಂದ್ ಕೂಡ್ದ ಮನೆ ಐನ್ಮನೆ. ಇದೆಲ್ಲ ಸೇರಿರುವ ಮನೆ ಎಲ್ಲ ವಿಧಲಿನೂ ಬೇರೆ ಜಾತಿಯವರ ಮತ್ತು ಗೌಡ್ರಗಳ ಬೇರೆ ಸಾಮಾನ್ಯ ಮನೆಗಳ್‌ಂದ ಬೇರೆಯಾಗಿ ಮತ್ತೆ ವೈಶಿಷ್ಟ್ಯಪೂರ್ಣವಾಗಿದ್ದದೆ. ದೈವ, ದೇವರ ಹುಟ್ಟ್ ಸಾವ್, ಬದುಕ್‌ನ ಎಲ್ಲಾ ಸಾಂಸ್ಕೃತಿಕ ಆಚರಣೆಗ ಕುಟುಂಬದ ಸಮಸ್ತರ್ ಸೇರ್ದರ್‌ದ ಐನ್ಮನೆಗ ನಡ್ದವೆ. ಕೂಡು ಕುಟುಂಬ ಪದ್ಧತಿಲಿ ಸಮಸ್ತರ್ ಒಂದೇ ಸೂರಿನ ಅಡಿಲಿ ಬೊದ್ಕುವೆ. ಎಲ್ಲವೂಕೂ ಒಂದೇ ಅಡಿಗೆ ಕೋಣೆ ಇದ್ದ್ ಕೂಡ್ ವ್ಯವಸ್ಥೆ ಇತ್ತ್. ಈ ಮನೆಲಿ ಬೇರೆನೆ ಹೆಚ್ಚಿಗೆ ಉಪಯೋಗ ಆಗುವ ಜಾಗೆಂತೇಳ್ರೆ ಅದ್ ಒಳಾಂಕಣ ಮಾತ್ರ.

ಐನ್ಮನೆ ತಳಪಾಯದ ಹೊರ್ಗೆ ಎತ್ತರ ಆಗಿದ್ದ್ ಒಳ ಭಾಗಕೆ ಸೇರ್ದಂಗೆ ಚಾವಡಿಂದ ಒಳಾಂಗಣ ತಗ್ಗಲಿ ಇದ್ದರೆ ಒಳಾಂಕಣ ಇನ್ನೂ ತಗ್ಗಲಿದ್ದದೆ. ಇದ್ ತಾವರೆನ ಎಸಳ್‌ಗ್ ಒಂದರಲ್ಲಿ ಇನ್ನೊಂದರೊಟ್ಟಿಗೆ ಸೇರ್ದಾಂಗೆ ಸಣ್ಣದಾಗಿ ರೂಪ ತಾಳ್ದ ಆಕೃತಿನ ಹೋಲ್ದೆ. ಚೌಕಲಿ ಆವರ್ಸಿಕಂಡ ನಾಲ್ಕಂಕಣ ಐನ್ಮನೆದ ರಚನೆ ಕಂಡ ಹಾಗೆ 'ಐಸಿರಿ ಕೂಡಿಬಂದದೆ' ಎಂಬ ನಂಬಿಕೆನ ಹೊಂದಿದ್ದವೆ. ಅಂಕಣಲಿ ಬಿದ್ದ ನೀರ್ ಈಶಾನ್ಯ ದಿಕ್ಕಿಲಿ ಹರಿವಹಂಗೆ ಮಾಡ್ಯೊಳೊ. ಆ ಭಾಗಲಿ ಬಾಮಿ ಇದ್ದದೆ. ಮನೆನ ಮುಖ್ಯ ಬಾಗ್ಲ್ ಮೂಡು ದಿಕ್ಕಿಗೆ ಮಾಡಿರ್ದು ಐನ್ಮನೆ ವಾಸ್ತು ವೈಶಿಷ್ಟ್ಯ.

ಸಾಮಾನ್ಯ ಮನೆಲಿ ಅಡ್ಗೆ ಮನೆ ಆಗ್ನೇಯಲಿದ್ದರೆ ಈ ಮನೆಗ ಪೂರ್ವ ಆಗ್ನೇಯದ ಸರಿ ವಿರುದ್ಧ ದಿಕ್ಕಿನ ಪಶ್ಚಿಮ ವಾಯುವ್ಯಲಿ ಇದ್ದರೆ ಈ ಮನೆನ ಆಗ್ನೇಯ ದಿಕ್ಕಿಲಿ ಧರ್ಮದೈವದ ಸ್ಥಾನ ಇದ್ದರೆ ಇದಕ್ಕೆ ಕಿಚ್ಚಿ ಮತ್ತೆ ಗಾಳಿಗೆ ಇರುವ ಅನೂನ್ಯ ಸಂಬಂಧನ ಅನುಲಕ್ಷಿಸಿ ವಾಯುವ್ಯಲಿ ಅಡುಗೆ ಕೋಣೆ ಹೊಂದಿಸಿದ್ದವೆ. ದಕ್ಷಿಣ ದಿಕ್ಕಿನ ಬುಟ್ಟ್ ಎಲ್ಲಾ ಕಡೆಂದ ಹೊರಗೆ ಹೋಕೆ ಬಾಗ್ಲ್ ಇದ್ದದೆ. ಈ ಎಲ್ಲಾ ವಿಶೇಷತೆಗಳ ಐನ್ಮನೆನ ನೋಡ್ರೆ ಜನ ಸಮುದಾಯದ ಲೋಕಜ್ಞಾನದ ಹಿನ್ನೆಲೆಲಿ ರಚನೆ ಆದ ಐನ್ಮನೆಂತ ಹೇಳಿಕೆ ಯಾವ ಸಂಶಯನೂ ಇಲ್ಲೆ.



# ಬಲಿಯಿಂದ್ರತೇಳಿರೆ ಯಾರ್ ಉಗ್ಗಪ್ಪ... ದೇವುರ್‌ನಾ?

ಭವಾನಿ ಶಂಕರ ಅಡ್ತಲೆ

ಅಣ್ಣಿ ಅಜ್ಜ ಮೆಗನ ಚಿಂಟೆಲಿ ಕುದ್ದ್ ಒಂದು ಕಾಲ್ ಮೇಲೆ ಇಸಿ, ಇನ್ನೊಂದು ಕಾಲ್‌ನ ಚಿಂಟೆಂದ ಕೆಳಗೆ ಇಸಿ ಒರ್ಲ್ ಕಲ್ಲಲಿ ಎಲೆ ಅಡಿಕೆನ ಗುದ್ದಿಸಣ್ಣ ಮಾಡಿ ಕೈಗೆ ಸೊರ್‍ಗಿ ಇನ್ನೇನ್ ಬಾಯಿಗೆ ಹಾಕೊಕು ತೇಳಿಕನ ಅಜ್ಜನ ದೊಡ್ಡ ಪುಳ್ಳಿ ದಮ್ಮು ಕಟ್ಟಿ ತೋಟದ ಕಡೆಂದ ಓಡಿ ಬಾತ್. ಅಜ್ಜಿ ಅಜ್ಜ ಹಾಂಗೆ ಎಲೆ ಅಡಿಕೆನ ಕೈಲೇ ಹಿಡ್ಕಂಡ್ ಕೇಳ್ದೊ ಎಂತಾ ಮಾರಾಯ? ತೋಟಲಿ ಕೇರೆ ಹಾವು ಮನಿ ನೋಡಿ ಹೆದರ್‌ದನಾ ಹೇಂಗೆ? ಯಾಕೆಯ ಹಾಂಗೆ ಜುವ್ವ ಬುಟ್ಟು ಓಡಿ ಬಂದದ್‌ತ ಸ್ವಲ್ಪ ಜೋರು ಸ್ವರಲಿ ಕೇಳ್ದೊ.

ಹೈದ ಅಷ್ಟೇ ಖುಷಿಲಿ"ಉಗ್ಗಪ್ಪ.. ಉಗ್ಗಪ್ಪ ನಾವು ಈ ವರ್ಷ ದಿಪಾವಳಿಗೆ ಬಲೇಂದ್ರ ಹಾಕೊಮೊನಾ?" ಹೈದನ ಹುರುಪು ನೋಡಿ ಅಜ್ಜಂಗೆ ಏನ್ ಹೇಳೊಕಂತ ಗೊತ್ತಾತ್ಲೆ. ಒಮ್ಮೆಗೆ ಯೋಚನೆ ಮಾಡಿ ಅವನ ಹುರುಪಿಗೆ ನೀರ್ ಹಾಕುದು ಬೇಡಾಂತ ಯೋಚನೆ ಮಾಡಿ "ಯಾರ್ ಹಾಕುದು ಮಂಜ"? ನಂಗೆ ಈಗ ಮುಂದೆನಾಂಗೆ ಕಾಡಿಗೆ ಹೋಗಿ ಹಾಲೆ ಮರದ(ಅಟ್ಟೆ ಮರ) ಹುಡ್ಕಿ ಕಡ್ಕಂಡ್ ತಾಕೆ ಆಕಿಲೆ ಮತ್ತೆ ಬಲೇಂದ್ರಕೆ ಮಾಲೆ ಮಾಡಿಕೆ ಹಂದಿ ಬೊಳ್ಳಕಾಯಿ, ನರಿಕೊಂಬು, ಕೊಯ್ಕಂಡ್ ಬಾಕೆ ಆಕಿಲೆ ಮತ್ತೆ ಮುಂದೆಲ್ಲಾ ಬಲೇಂದ್ರಂಗೆ ತೇಳಿಯೇ ನೆಟ್ಟ ಗದ್ದೆಲಿ ಚೆಂಡು ಹೂ ಬೆಳ್‌ಸ್ತಿದ್ದೊ. ಈಗ ಪೇಟೆಂದ ತರೊಕಷ್ಟೆ ನಂಗೆ ಹಂದಿಬೊಳ್ಳಿ ಕಾಯಿ ನೆರಿಕೊಂಬು. ಚೆಂಡುಹೂ ಎಲ್ಲಾ ಮಾಲೆ ಮಾಡಿಕೆ ಕಣ್ಣ್‌ನೂ ಕಾಂಬೊದುಲೆ. ಈಗ ಮಾಲೆ ಮಾಡಿಕೆ ಕುದ್ದರೆ ಕೈಯೆಲ್ಲಾ ಒಟ್ಟೆ ಆದು. ಏನ್ ಮಾಡ್ದ್ ಹೇಳ್ ಮುಂದೆಲ್ಲಾ ನನ್ನ ಮಗಕ್ಕಳ ಮಕ್ಕ ಬಾತಿದ್ದೊ, ಆಚೆ ಮನೆ ಈಚೆ ಮನೆವೆಲ್ಲಾ ಬಾತಿದೊ.

ಎಲ್ಲಾ ಸೇರಿಕಂಡ್ ಕೂಡಿ ಆಡಿ ಮಾಡ್ತಿದ್ದೊ. ಈಗ ಯಾರಿಗೂ ಬೇಡ ಮಾರಾಯ. ಹೈದನ ಮೋರೆ ಸಣ್ಣದಾತ್" ಅದೆಲ್ಲಾ ನಾವೇ ಮಾಡುವೆ ಉಗ್ಗಪ್ಪ ನೀವು ಹೇಳಿ ಕೊಟ್ಟರೆ ಸಾಕ್"

ನೀ ಒಬ್ಬ ಮಾಡವ ಬಾಕಿದ್ದೊವು ಎಲ್ಲಾ ಉರಿ ಬಂದ್‌ಕಂಡ್ ಎಲ್ಲಾರ್ ಓಡುವೊ, ಹಬ್ಬಂತ ಇಲ್ಲೆ ಹರಿದಿನಂತ ಇಲ್ಲೆ. ನಿಮ್ಮ ಶನಿ ಹಿಡ್ದ ಟಿವಿ ಉಟ್ಟಲ್ಲಾ ಅದ್ ಇರ್‌ಕನ ಹಬ್ಬ ಯಾಕೆ ಇನ್ನೊಂದು ಯಾಕೆ"? ಅಲ್ಲ ಉಗ್ಗಪ್ಪ, ಈ ಹಬ್ಬ ದೀಪಾವಳಿ ಹಬ್ಬಂತ ಯಾಕೆ ಕರೆದು ದೊಡ್ಡ ಹಬ್ಬಂತ ಯಾಕೆ ಕರ್‍ದೊ? ಬಲಿಯಂದ್ರ ತೇಳಿರೆ ಯಾರ್ ಉಗ್ಗಪ್ಪ - ದೇವುರ್‌ನಾ"?

" ಅದೊಂದು ದೊಡ್ಡ ಕತೆ ಮಾರಾಯ ಅದರೆಲ್ಲ ಹೇಳಿಕಂಡ್ ಕುದ್ದರೆ ಸುಮಾರು ಉಟ್ಟು ನಂಗೆ ಈಗ ಪುರುಸೊತ್ತು ಇಲ್ಲೆ".

"ಉಗ್ಗಪ್ಪ– ಉಗ್ಗಪ್ಪ– ಪ್ಲೀಸ್ ಉಗ್ಗಪ್ಪ" ಕಥೆ ಹೇಳಿಕನಾ ಸಣ್ಣ ಪಿಳ್ಳಿ ದೂರಲಿದ್ದಂವ ಬಂದ್ ಅಜ್ಜನ ಹಕ್ಕಲೆ ಕುದ್ದತ್.

ದೀಪಾವಳಿನ ಎಲ್ಲ ಕಥೆ ಹೇಳಿಕೆ ಆಕಿಲೆ .ಆದರೆ ಸಣ್ಣ ರೂಪಲಿ ದೀಪಾವಳಿನ ಹೇಂಗೆ ಮತ್ತೆ ಯಾಕೆ ಆಚರಣೆ ಮಾಡುವೆಂತ ಹೇಳಿನೆ ಕೇಳಿ. ಸುಮ್ಮನೆ ಕೇಳಿ ಸುಮ್ಮನೆ ಕೇಳಿಕಂಡ್ ಬಾಯಿ ಮುಚ್ಚಿ ಕುದ್‌ರೊಕು ಕಿರಿಕಿರಿ ಮಾಡಿಕೆ ಬತ್ತ್.

ದೀಪಾವಳಿಂತೇಳ್‌ದು ಹಿಂದೆನ ದ್ರಾವಿಡರ ಕಾಲಲೇ ದೊಡ್ಡ ಹಬ್ಬಗಳಲ್ಲಿ ಒಂದು ತುಳು ತಿಂಗಳ ಬೆಳ್ತಿಂಗ ಅಂದ್ರೆ ಈ ನಿಮ್ಮ ಕ್ಯಾಲೆಂಡರ್‌ಲಿ ಉಟ್ಟಲ್ಲಾ ಅಕ್ಟೋಬರ್– ನವಂಬರ್ ತಿಂಗಳ ಚತುರ್ದಶಿಂದ ಪಾಡ್ಯದವರೆಗೆ ಮೂರು ದಿನೆಲಿ ಹಬ್ಬನ ಬಾರಿ ಗಡ್ದ್‌ಲಿ ಆಚರ್‍ಸುವೆ ನೀ ಕೇಳ್ದಾಂಗೆ ನಾನು ನನ್ನ ಅಪ್ಪನೊಟ್ಟಿಗೆ ಕೇಳ್‌ಕನ ಅವು ಹೇಳ್ದ ಕತೆ ಕೇಳಿರೆ ಈ ದೀಪಾವಳಿ ಅಮವಾಸ್ಯೆಂದ ಹಿಂದೆನ ದಿನ ನರಕಾಸುರನಂತೇಳುವ ರಾಕ್ಷಸನ ಕೊಂದ ದಿನ ಅಂವ ದೊಡ್ಡ ಹೆಣ್ಣ್ ಹುಚ್ಚ ಆಗಿತ್ತ್‌ಗಡ"

" ಹೆಣ್ಣ್ ಹುಚ್ಚಂತೇಳಿರೆ ಎಂತ ಉಗ್ಗಪ್ಪ;? ದೊಡ್ಡ ಪಿಳ್ಳಿ ಕೇಳ್ತ್" ಅದ್ ನಿನ್ನ ಅಪ್ಪನೊಟ್ಟಿಗೆ ಕೇಳೊಕು ನಂಗೆ ಗೊತ್ತಿಲ್ಲೆ. ಅಧಿಕಪ್ರಸಂಗ ಮಾತಾಡಿರೆ ಕಥೆ ಹೇಳ್ದುಲೆ".

ಇಲ್ಲೆ ಉಗ್ಗಪ್ಪ ಇನ್ನ್ ಮಾತಾಡ್ದುಲೆ ಹೇಳಿ ಹೇಳಿ" ಮಕ್ಕ ಇಬ್ಬರೂ ಒಟ್ಟಿಗೆ ಹೇಳ್ದೊ.

" ಹಾಂಗೆ ಆ ರಾಕ್ಷಸನ ಕೊಲ್ಲುಕನ ಕೃಷ್ಣ ಅವನ ಹೆಣ್ಣ್ ಸತ್ಯಭಾಮೆನ ಸಹಾಯನೂ ತೆಕಂಡಿತ್ತ್‌ಗಡ, ಕೊಂದ್ ಬೊಚ್ಚಿದ ಕೃಷ್ಣ ಬೊಚ್ಚೆಲ್‌ನ ಪರಿಹಾರ ಮಾಡಿಕೆ ಬೇಕಾಗಿ ಕೃಷ್ಣ ಮೈಗೆಲ್ಲಾ ಎಣ್ಣೆ ಹಾಕಿ ಉಜ್ಜಿ ತಿಕ್ಕಿ ಆಯಾಸ ಪರಿಹಾರ ಮಾಡಿಕಂತ್‌ಗಡ ಆ ನರಕಾಸುರನ ಕೊಂದ ಜಾಗ "ನರಕ"ಂತ ಕರ್‍ದೊ ಮತ್ತೆ ಕೃಷ್ಣ ಮೀದ ನೀರ್‌ಹರ್‍ದ್‌ದರ ಎಣ್ಣೆ ಹೊಳೆಂತ ಕರೀತಾ ಒಳೊ. ಈ ಜಾಗೆ ಈಗಲೂ ಕಾರ್ಕಳ ತಾಲೂಕುಲಿ ಉಟ್ಟುಗಡ. ನಾ ಹೋತ್‌ಲೆ ಹಿಂದೆನೊವು ಹೇಳ್ದರ ಕೇಳಿ ನಾ ಹೇಳ್ದ್" " ಆಲೆಕ್ಕಲಿ ಹಬ್ಬನ ಇಷ್ಟ್ ಜೋರು ಆಚರಿಸುದು ಯಾಕೆ ಉಗ್ಗಪ್ಪ"? ಸಣ್ಣ ಪಿಳ್ಳಿ ಮೆಲ್ಲನೆ ಹೆದರಿ ಕೇಳ್ತ್

ದೀಪಾವಳಿ ಊರ್‌ನ ಒಳ್ಳೆದಕ್ಕಾಗಿ ಆಚರ್‍ಸುದು ಮಂಜ. ಊರ್‌ಲಿ ಶಾಂತಿ ಸಿಕ್ಕೊಕು ತೇಳಿ ಎಲ್ಲವು ಕುಟುಂಬದೊವು ಬಂದುಗ ಸೇರಿಕಂಡ್ ಆಚರ್‍ಸುದು.

ದೀಪಾವಳಿ ಕೊಟ್ಟ ಹೆಣ್ಣ್ ಮಕ್ಕಳಿಗೆ ಅವರವರ ತವರಿಗೆ ಬಾದುತೇಳಿರೆ ಬಾರಿ ಖುಶಿ ಹೊಸ ಮದುಮಕ್ಕಂತೂ ಅವರ ಗಂಡನೊಟ್ಟಿಗೆ ಶುರುನ ದೀಪಾವಳಿಗೆ ತವರಿಗೆ ಬಾದು ಆಚರಿಸುದು ತೇಳಿರೆ ಎಲ್ಲಿಲ್ಲದ ಖುಷಿ. ಆ ವರ್ಷದ ದೀಪಾವಳಿ ಅವರ ಜೀವನ ಪರ್ಯಂತ ನೆನ್‌ಪಾಗಿ ಉಳ್ದದೆಂತ ತಿಳ್ದೊವು ಹೇಳುವೆ.

ಬೊಳ್ಳುನ ಹಬ್ಬ ಆಗಿರುವ ಇದ್ ಒಳ್ಳೆದ್ ಮಾಡುವ ದೀಪಾವಳಿ ಪ್ರತಿ ವರ್ಷನೂ ಆಶ್ವಯುಜ ತಿಂಗಳ ಅಮವಾಸ್ಯೆಂದ ಹಿಂದೇನ ದಿವಸ ಶುರು ಆದೆ. ಅಂದೇ ನರಕ ಚತರ್ದಶಿ. ಹಿಂದೆನ ದಿನ ಹಿಂಬೊತ್ತಿಗೆ ಬಿಸಿನೀರ್‌ನ ಮಡ್ಕೆ ತೊಳ್ದ್ ಅದರ ಮೇಲೆ ಎಲ್ಲ ಚಿತ್ರ ಬುಡ್ಸಿ ನೀರ್ ತುಂಬುಸಿ ಇಸುದು ವಾಡಿಕೆ. ಮಾರನೆ ದಿನ ಕೋಳಿ ಕೂಂಗುವ ಹೊತ್ತಿಗೆ ಎದ್ದ್ ನೀರ್‌ನ ಬಿಸಿಮಾಡಿ ಮನೆವು ಎಲ್ಲಾ ತಲೆಗೆ ಎಣ್ಣೆ ಹಾಕಿ ಹಬ್ಬದ ಮೀಯಾಟ ಮಾಡುವೆ. ಅದ್ ಎಲ್ಲ ಆದ ಮೇಲೆ ಕಲ್ಸಿದ ಅವಲಕ್ಕಿನು ಬಿಸಿ ದೋಸೆ ತಿಂಬೊದು ನಮ್ಮ ಹಿಂದೆನೊವು ಮಾಡಿಕೊಂಡು ಬಂದ ಪದ್ಧತಿ." ಈಗ ಅವಲಕ್ಕಿ ಯಾರಿಗೂ ಬೇಡ"? ದೊಡ್ಡ ಪಿಳ್ಳಿ ಮೆಲ್ಲ ಪ್ರಶ್ನೆ ಕೇಳ್ತ್

ಹೌದುಯಾ ಈಗ ಯಾರ ದೊಂಡೆಲಿ ಅವಲಕ್ಕಿ ಇಳೊದುಲೆ ಈಗನ ಕೆಲ್ಸದೊವುಕೆ ಅವಲಕ್ಕಿ ಕೊಟ್ಟರೆ ನಾಯಿಗೆ ಹಾಕಿ ಸೀದ ಹೋದವೆ".

" ಹಾಂ ಆಮೇಲೆ ಮನೇಲಿರುವ ಕೃಷಿ ಸಾಮಾಗ್ರಿಗಳ ನೇಗಿಲು, ನೊಗ, ಕತ್ತಿ ಕೊಟ್ಟು ಪಿಕ್ಕಾಸು ಇದರೆಲ್ಲಾ ಲಾಯಿಕ್ ತೊಳ್ದ್ ಮನೆ ಜಾಲ್‌ಲಿ ಇಸುದು. ದನಗಳ ಹಟ್ಟಿ, ತೊಳ್ಸಿ ಕಟ್ಟೆ ಇಜ್ಜೆಲ್ ಎಲ್ಲಾ ಸ್ವಚ್ಛಗೊಳ್ಳುವೊ. ನಮ್ಮ ಹಿರಿಯೊವು ಅಂದ್ ಕತ್ತಲೆಗೆ ಅರಿಸಿನ ಸೊಪ್ಪುಲಿ ಬೆಲ್ಲ– ಕಾಯಿ ಹಾಕಿ ಹಿಟ್ಟ್ ಮಾಡಿ ನಮ್ಮ ಹಿರಿಯೊವು ಸತ್ತೊವುಕೆ ಬಳ್ಸುವೊ. ಆಮೇಲೆ ಹಬ್ಬದ ಊಟನ ಉಂಬಕೆ ಪ್ರಾರ್ಥನೆ ಮಾಡಿಕೊಂಬೊದು. ಆಮೇಲೆ ಮನೆಲಿ ನೆಂಟ್ರ್ ಇದ್ದರೆ ಎಲ್ಲೊವು ಸೇರಿ ಒಟ್ಟಿಗೆ ಉಂಬೊದು,.

ಅಂದ್ ಕೊಲೆಗ ಎಲ್ಲ ಬಂದವನೋ ಉಗ್ಗಪ್ಪ"? ಸಣ್ಣ ಪಿಳ್ಳಿ ಕೇಳಿಕಂಡ್ದ ಅಜ್ಜನ ಪಕ್ಕ ಬಂದ್ ಕುದ್ದತ್. ಕೊಲೆಗ ಅಂದ್ ಬಾವೊಂತ ನಂಬಿಕೆ ಈಗಲೇ ಭಾಕಿಲೆ ನೀ ಹೆದ್ರಬಡಂತ ಹೇಳಿ ಜೋರು ನಗಾಡ್ದೊ." ಸತ್ತಾಂವ ಎಲ್ಲಿ ಹೋಗುಟೊ. ಏನೋ? ಆದ್ರು ಮನ್ಸ್ ಕೇಳದುಲೆಲ್ಲಾ ಮಂಜ. ಈಗ ನಾ ಸತ್ತಮೇಲೆ ನೀವ್ಗೆಲ್ಲಾ ನನ್ನ ನೆನ್ಪು ಆಕಿಲೆನಾ

ಹಾಂಗೆಲ್ಲಾ ಹೇಳ್ಬಡಿ ಉಗ್ಗಪ್ಪ, ನಾವುಗೆ ಬೇಜಾರ ಆದೆ" ಪಿಳ್ಳಿಗ ಮೋರೆ ಮೋರೆ ನೋಡಿಕಂಡ್ ಚಪ್ಪೆ ಮಾಡಿಕೊಂಡೊ.

" ನಡು ದೀಪಾವಳಿ ದಿನ ಅಮವಾಸ್ಯೆ ಅಂದ್ ದೀಪಾವಳಿ ಹಬ್ಬಕ್ಕೆ ಬೇಕಾದ ಹಾಲೆಮರದ ಗೆಲ್ಲ್ ಗದ್ದೆ ಪುಣಿಲಿ ಮತ್ತೆ ಹಟ್ಟಿ ಬಾಗ್‌ಲ್‌ಲಿ ಊರಿಕೆ ತಾವೊ .ಅಂಗಳಲಿ ಬಲಿಯೇಂದ್ರ ಮರನ ಹಾಕಿ ಎಲ್ಲ ವ್ಯವಸ್ಥೆ ಮಾಡುವೊ. ಬತ್ತದ ಕದ್‌ರ್, ಪಾರೆ ಹೂ, ಹಂದಿ ಬೊಳ್ಳಿ ಕಾಯಿ, ನರಿಕೊಂಬು, ಸೀತೆ ಹೂ, ಚೆಂಡು ಹೂ, ಕೇನೆ ಹಣ್ಣು, ಪೊಲಿಬೊಳ್ಳಿ, ನೆಲಗುಬ್ಬಿಹಣ್ಣು, ಹೀಂಗೆ ಎಂತೆಲ್ಲಾ ಲಾಯಿಕಿ ಕಂಡದೆ ಅದರೆಲ್ಲಾ ಹೆಣ್ಣ್ ಮಕ್ಕ ಮಾಲೆ ಕಟ್ಟುವೊ, ಹತ್ತಿಪ್ಪತ್ತು ಮಾಲೆ ಹಾಕಿ ದೇವ್ರ ಶೃಂಗಾರ ಮಾಡುವೊ. ಬಲಿಯೇಂದ್ರ ಶೃಂಗಾರ ಮಾಡಿಕೆ ಚೆಂಡು

ಹೂ ಬಾರಿ ಲಾಯಿಕೆ ದೇವರ ಚಿಬುಳಗೆ ಬಣ್ಣದ ಚೆಂಡು ಹೂನೇ ಆಕು. ಅದರ ನಡು ನಡುಲಿ ಕೋಳಿ ಜುಟ್ಟು ಹೂನ ಜಾಲರಿನಾಂಗೆ ನೇತಾಡ್ಸಿರೆ ಇನ್ನೂ ಲಾಯಿಕಿ ಕಂಡದೆ. ದನ ಕೂಡುವ ಹೊತ್ತಿಗಾಕನ ಮನೆಯ ಎಲ್ಲಾ ಹಿರಿಯೊವು ಜಾಲ್‌ಲಿ ಇದ್ದ ತೊಳ್ಸಿ ಕಟ್ಟೆ ಕರೆಲಿ ಬಲೀಂದ್ರ ಮರ ನೆಡುವೊ. ಕೆಲವು ಮನೆಗಳ್ಲಿ ಅಟ್ಟೆ ಮರ(ಒಂದು ಮರ) ಇನ್ನ್ ಕೆಲವು ಕಡೇಲಿ ಜೋಡು ಮರ ಹಾಕುವ ಪದ್ದತಿ ಉಟ್ಟು. ಮರ ಹಾಕಿದ ಮೇಲೆ ಬೆದರ್‌ತಟ್ಟೆನ ಗುಣಿಸ್ ಆಕಾರಲಿ ಮರಕ್ಕೆ ಕೈಗಲಾಂಗೆ ಕಟ್ಟುದು .ಇದು ಮಾಲೆಗಳ ಅಲಂಕಾರ ಮಾಡಿಕೆ ಕೂಡಾ ಸುಲಭ ಆದೆ. ಮನೆವರೊಟ್ಟಿಗೆ ನೆಂಟ್ರಗ ಎಲ್ಲ ಸೇರಿಕಂಡ್ ಬಲಿಯೇಂದ್ರನ ಶೃಂಗಾರ ಆದ ಮೇಲೆ ಬಲಯೇಂದ್ರ ಮರನ' ಬುಳಿಕ್ಕಿ ಮರಾಂತ' ಕರ್ದವೆ. ಈ ಒಂದು ನಂಬಿಕೆ ಕೃಷಿ ಸಂಬಂದಂದಾಗಿ ತುಂಬ ವಿಶಾಲವಾದ ಅರ್ಥನ ಪಡ್ಕಂಡ್ ಉಟ್ಟುಂತ ಹಿರಿಯೊವು ಹೇಳ್ತಿದ್ದೊ.

ಹೀಗೆ ಮರದ ಎಲ್ಲ ಕೆಲ್ಸ ಆದ ಮೇಲೆ ಮನೆವು ಎಲ್ಲ ಮೀದ್ ಶುದ್ಧ ಮಾಡಿಕಂಡ್ ಮನೆ ಒಳಗೆ ದೇವರ್‌ಗೆ ದೀಪ ಇಸಿ ಕೈ ಮುಗ್ಯೊವೊ .ಹಾಂಗೆ ಹೊರಗೆ ಬಂದ್ ಬುಳಕಿ ಮರದ ಬುಡಲಿ ಬಾಳೆ ಎಲೆ ಹಾಕಿ ಅಕ್ಕಿ ಕಾಯಿ ಎಲೆ ಅಡಿಕೆ ಎಲ್ಲಾ ಬಳ್ಸಿ ಪಕ್ಕಲಿ ದೀಪ ಇಸಿ ಮನೆವು ನೆಂಟ್ರ್‍ಗ ಸೇರಿಕ ಂಡ್ "ಹರಿ ಹರಿ ಬಲಿಯೇಂದ್ರ, ಸಿರಿ ಸಿರಿ ಬಲಿಯೇಂದ್ರ ಆ ಊರ್‌ನ ಪೊಲಿ ತಕಂಡ್ ಬಂದ್ ಈ ಊರ್‌ನ ಕಲಿ ತೆಕೊಂಡ್ ಹೋಗುಂತ ಮೂರು ಸರ್ತಿ ಕೂಗು ಹಾಕುವೆ ಆ ಮೇಲೆ ಮನೆ ಒಳಗೆ ಹೋಗಿ ಗಮ್ಮತ್ ಕುದ್ದ್ ಉಂಡೊ".

"ಹಿಂದೆ ಗಮ್ಮತ್ತ್‌ಂತ ಎಂತ ಇರ್ತಿತ್ತ್ ಉಗ್ಗಪ್ಪ"?

ಆಗನ ಗಮ್ಮತ್ತೇ ಬೇರೆ ಮ್ಂಜ ಈಗನಾಂಗೆ ಕೋಳಿ, ಮೀನ್ ಕಾಸಿದ್ ಎಲ್ಲ ಇರ್ತಿತ್ತ್‌ಲೆ ಹೆಚ್ಚಾಗಿ ಹಂದಿ ಗೈಪು ಅಪ್ಪದಿಟ್ಟ್, ಕೋಳಿ ಕೊಂದರೆ ಪೊಕ್ಕಳ ರೊಟ್ಟಿ. ಸಣ್ಣ ಅಪ್ಪದಿಟ್ಟ್ ಮನಿ ಆದರೆ ಒಬ್ಬೊಬ್ಬ ಕಮ್ಮಿಲಿ ಇಪ್ಪತ್ತೈದು ಹೊಡ್ಯೆತಿದ್ದೊ. ಹುಳಿ ದೋಸೆ ಎಲ್ಲ ದನಕ್ಕೆ ಹಬ್ಬ ಕೊಡಿಕೆಂತ ಮಾಡ್ತಿದ್ದೊ .ಅದೆಲ್ಲಾ ಹೇಳಿರೆ ನೀವ್ಗೆ ಅರ್ಥ ಆಕಿಲೆ ಬುಡಿ'

"ದೀಪಾವಳಿ ಕಡೆ ದಿನ ಬಲಿ ಪಾಡ್ಯ ಅಂದು ಕೂಡಾ ಎಲ್ಲವೂ ಬೊಳ್ಳಿ ಬುಡುಕನನೇ ಎದ್ದ್ ಎಲ್ಲವೂ ಮೀದ್ ಅವರವರ ಕುಟುಂಬದ ಮೂಲ ಮನೆಗಳಿಗೆ ಹೊರ್ದುವೊ. ಅಲ್ಲಿ ನಮ್ಮ ಕುಲ ದೇವ್ರ ಮುಡಿಪು ಎಲ್ಲ ಬಿಚ್ಚಿ ಶುದ್ಧ ಮಾಡಿ ಹರಿಕೆ ಎಲ್ಲ ಹಾಕುವೊ. ಆಮೇಲೆ ಮನೆ ದೈವಕ್ಕೆ ಜಾಗೆನ ದೆವ್ವಗಳಿಗೆ ಬಾಳೆಹಣ್ಣ್ ಅವಲ್ಕಕಿ ತಂಬಿಲ ಮಾಡುವೊ, ವೈದಿಕ ಬ್ರಾಹ್ಮಣಶಾಹಿ ವಾಮನನ ಕುತಂತ್ರಂದಾಗಿ ಪಾತಾಳಕ್ಕೆ ಮೆಟ್ಟಿ ಇಳಿದ ಸನ್ಮಾರ್ಗದ ಶೂದ್ರ ರಾಜ ಬಲಿಚಕ್ರವರ್ತಿ ಮೂರು ದಿನ ದೀಪಾವಳಿ ಸಂದರ್ಭಲಿ ಭೋಲೋಕಕ್ಕೆ ಬಾದೂಂತ ನಾವೆಲ್ಲಾ ನಂಬಿಕಂಡ್ ಈ ಆಚರಣೆಗಳ ಮಾಡ್ದು

ಅಂದೇ ಹಿಂಬೊತ್ತು ಹಟ್ಟಿಲಿದ್ದ ದನಕರುಗಳೆಲ್ಲ ಮೀಸಿ ಹೂಮಾಲೆ ಎಲ್ಲ ಹಾಕಿ ಗಂಧದ ಬೊಟ್ಟ್ ಹಾಕಿ ಒಂದು ಕುಕ್ಕೆಲಿ ಎಲೆ ಅಡಿಕೆ ನೆಣೆ ಬತ್ತಿ ಇನ್ನೊಂದ ಉಕುಕ್ಕೆಲಿ ಅವಲಕ್ಕಿ ಕಾಯಿ ಹೋಳು, ಬಾಳೆ ಹಣ್ಣ್ ಎಲ್ಲ ತುಂಬಿಸಿಕಂಡ್ ಕತ್ತಲಾದ ಕೂಡ್ಲೆ ಗದ್ದೆ ಪುಣಿಲಿ ಹಾಲೆ ಮರದ ಕೋಲು ಊರಿ ಅದ್ಕೆ ಎಣ್ಣೆ ಹಾಕಿ ಅವಲಕ್ಕಿ ಬಾಳೆ ಹಣ್ಣ್ ಎಲ್ಲ ಬಳ್ಸ್‌ವೆ. ಹಾಂಗೆ ಹಟ್ಟಿ ಬಾಗ್‌ಲಿಲಿ ಕೂಡ ಹಾಲೆ ಮರದ ಕೋಲು ಊರಿ ಅರಳಿನ ದೀಪ

ಇಸಿ, ಬಾಲೆ ಎಲೆಗೆ ಕೈ ಮುಗ್ದವೆ.. ಆಮೇಲೆ ದನಗಳ ಪೂಜೆ ಬೆಳ್ಕ್ ತೋರ್ಸುದು ಪ್ರದಾನವಾಗಿರದು. ಬೇಸಾಯಕ್ಕೆ ಆಧಾರವಾದ ದನ ಎತ್ತುಗಳೇ ವಿಶೇಷ ಮರ್ಯಾದೆ ಕೊಡ್ದು ಮನೆ ಯಜಮಾನ ಮೀದ್ ಹಣೆಗೆ ಗಂಧದ ಬೊಟ್ಟು ಹಾಕಿ ತಲೆಗೊಂದು ಬಿಳಿ ಮುಂಡಾಸ್ ಕಟ್ಟಿ, ತಡ್ಪೆಲಿ ತುಂಬ ಬಂಗಾರದ ಎಸಳ್‌ಗಳೊಟ್ಟಿಗೆ ದೀಪ ಎಲ್ಲ ಇಸಿಕಂಡ್ ಬತ್ತದ ರಾಶಿಗೆ ದನದ ಹಟ್ಟಿಗೆ ಬೇಸಾಯದ ಎಲ್ಲ ಸಾಮಾನ್‌ಗಳಿಗೆ ಬೆಳಕ್ ತೋರ್ಸ್‌ವೆ. ಆಮೆಲೆ ಕುಕ್ಕೆಲಿದ್ದ ಅವಲಕ್ಕಿ ಬಾಳೆಹಣ್ಣು ಕಾಯಿ ಹೋಳ್‌ನೆಲ್ಲ ಒಟ್ಟು ಸೇರ್ಸಿ ದನಗಳಿಗೆ ತಿಂಬಕೆ ಕೊಟ್ಟವೆ. ಎಲ್ಲ ದನಗಳ ಹಣೆಗೆ ಕೂಡಾ ಗಂಧ ಕುಂಕುಮ ಹಾಕಿ ಅಂದ್ ಅದರ ಹೆಸರಿಡ್ದ್ ಕರ್ದ್ ' ವಷಕೊಮ್ಮೆ ದೀಪಾವಳಿ ನೀವು ಬೆಳ್ಕ್ ನೋಡೀಂತ ಎಲ್ಲವುಕೆ ತಿಂಬಕೆ ಕೊಟ್ಟವೆ.

"ದನಗ ಆಗ ಪೆರ್ಚಿ ಕಟ್ಟುದುಲೆನಾ ಉಗ್ಗಪ್ಪ"? ಸಣ್ಣ ಪಿಳ್ಳಿ ಕೇಳ್ತ್ " ಹಾಂ ನಿನ್ನಾಂಗೆ ಇದ್ದೊವು ಕೆಲವು ಪೆರ್ಚಿ ಕಟ್ಟುವೆ, ಅವರ ಬಾಯಿಗೆ ಬಾಳೆ ಹಣ್ಣ್ ಅವಲಕ್ಕಿ ಕೊಟ್ಟಾಕನ ಎಲ್ಲಾ ಸರಿ ಆದೆ. ಈ ದಿನ ಬಲಿಯೇಂದ್ರ ತುಂಬ ಶೃಂಗಾರಲಿ ಇದ್ದದೆ. ದೊಡ್ಡ ಕೊಡೆನ ಶೃಂಗಾರ ಮಾಡಿ ಬಲಿಯೇಂದ್ರ ಮರಕ್ಕೆ ಕಟ್ಟುವೆ .ಈ ದಿನ ಅವಲಕ್ಕಿ ಬಾಳೆ ಹಣ್ಣ್ ಬಳ್ಸಿ ಬಲಿಯೇಂದ್ರಕ್ಕೆ ಕೂಗು ಹಾಕುವೆ. ಹಾಂಗೆ ಕೊನೆ ದಿನ ಅಕ್ಕಿ ತರಕಾರಿ ಬಡ್ಸಿ ಹರಿ ಹರಿ ಬಲಿಯೇಂದ್ರ, ಸಿರಿ ಸಿರಿ ಬಲಿಯೇಂದ್ರಂತ ಕರ್ದಾಂಗೆ ಕೂಗು ಹಾಕುವೆ.

ಹಿಂದೆನ ಕಾಲಲಿ ಹಬ್ಬಲೆಲ್ಲ ಒಂದು ಮುಡಿ ಅಕ್ಕಿನ ಹಿಟ್ ಮಾಡ್ತಿದ್ದೊ. ದೀಪಾವಳಿಗಾಗಿ ಒಕ್ಕಲೆನವರೆಲ್ಲಾ ಕರ್ದ್ ಹಿಂದೆ ಹಬ್ಬದ ಊಟ ಬಡ್ಸ್‌ತ್ತಿದ್ದೊ. ಈಗ ಹಿಟ್ಟ್ ಯಾರಿಗೂ ಬೇಡ, ಗಮ್ಮತ್ತು ಹಿಂದೆನ ನಂಬಿಕೆ ಸಂಪ್ರದಾಯಗ ಯಾರಿಗೂ ಈಗ ಪುರುಸೊತ್ತು ಇಲ್ಲೆ. ಏನ್ ಮಾಡ್ದು ಆ ಕಾಲವೇ ಲಾಯಿಕ್ ಇತ್ತ್ ಈಗ ನಾವು ಕಾಲ ಬಂದಾಂಗೆ ಕೋಲ ಕಟ್ಟುದು.

" ಅಲ್ಲ ಉಗ್ಗಪ್ಪ ಅಂದ್ರೆ ಬಲಿಯೇಂದ್ರ ಮರನ ಈ ವರ್ಷ ಹಾಕುದು ಬೇಡನಾ"?

ಅಯ್ಯೋ ಮಕ್ಕಳೆ ಹಾಕಿ ಹಿಂದೆನ ಸಂಪ್ರದಾಯ ನಂಬಿಕೆಗಳ ಉಳ್ಸಿ ಬೆಳ್ಸಿಕಂಡ್ ಬಂದರೆ ನಮ್ಮ ಹಿರಿಯರಾಂಗೆ ನಾವುನೂ ನೂರು ವರ್ಷ ಬಾಳಿ ಬದ್ಕುವೆ, ನಂಗೆನೂ ಹಿಂದೆದೆಲ್ಲಾ ಮತ್ತೆ ನೆಂಪಾದೆ.

**ನೆಂಟ್ರ್**

ಬೆಂಕಿ ನೀರ್ ಗಾಳಿ ಭೂಮಿ
ಮೇಲೆ ಸೂರ್ಯ ಚಂದ್ರರ್;
ಮರದ ಬೇರ್ ಎಲೆಯ ಹಸಿರ್
ಹಣ್ಣ್ ಹಕ್ಕಿ ನೆಂಟರ್

**ಕುತ್ಯಾಳ ನಾಗಪ್ಪ ಗೌಡ (ಕಿರಣ)**

# ನೆನ್ಪುನ ಜೊಂಪೆ

ವಿನೋದ್

ಕೆಲವ್ ವರ್ಷದ ಹಿಂದೆ ನಾವು ಮನೆ ಕಟ್‌ಕಾಕನ ರಾಮಾಚಾರಿ ತೇಳವ ಆಚಾರಿ ಕೆಲ್ಸ ಮಾಡ್ತಿತ್. ಅವನೊಟ್ಟಿಗೆ ಕುಳ್ಳ ತೇಳಂವ ಒಬ್ಬ ಹೈದ ಇತ್ತ್ ಅಂವ ಹೆಸ್ರ್ನ ತಕ್ಕಂಗೆ ಕುಳ್ಳನೆ. ಆದರೆ ಅವನ ಬಾಯಿ ಮಾತ್ರ ಉದ್ದ ಬಾಯಿ ಬುಟ್ಟರೆ ಸಾಕ್ ಬೇಡದ ಪದಗಳೇ ಬರ್ತಿದ್ದದ್

ಯಾರಾರ್ ಎನಾರ್ ಹೇಳ್ರೆ "ಬುಡಿ ಸಾ—— ಏನಾಗ್ಬೇಕು" ತೇಳ್ತಿತ್. ಅವಂಗೆ ಬುದ್ಧಿ ಹೇಳಿ ಹೇಳಿ ಸಾಕಾತ್, ಯಾರ್ ಸ ಅವನ ಬಾಯಿಗೆ ಕೈ ಹಾಕಿಕೆ ಹೋಗಿತ್ಲೆ.

ಆಗ ನಾ ಇನ್ನ್ ಸಣ್ಣವ. ನಂಗೆ ಅಂತ ಪದಗಳ ಪರಿಚಯ ಇತ್ಲೆ ಅದೆಲ್ಲ ಆದದ್ದ್ ಅವನ್ದನೇ ತ ಹೇಳಿಕೆ ದೊಡ್ಡವ್ ಚಿಕ್ಕವ್ ತ ನೋಡದೆ ಬಾಯಿಗೆ ಬಂದದ್ ಹೇಳ್ದೆ. ಕೆಲವೊಮ್ಮೆ ಮುಖಕ್ಕೆ ಅಡ್ಡ ಕೊಡಕು ತ ಅನ್ಸಿರು ದೊಡ್ಡವೆ ಸುಮ್ಮನಿರ್ಕನ ನಾ ಯಾಕೆ ಅವನ ಬಾಯಿಗೆ ಕೈ ಹಾಕಕು ತ ಸುಮ್ಮನಾಗ್ತಾ ಇದ್ದೆ ಹೀಂಗೆ ದಿನ ಕಳ್ತ್ ದೀಪಾವಳಿ ಹಬ್ಬ ಬಾತ್. ರಾಮಾಚಾರಿ ಮನೆಲಿ ಗೌಜಿಲಿ ಹಬ್ಬ ಮಾಡುವೆ. ಎಲ್ಲವ್ರ್ನ ಊಟಕೆ ಕರ್ದಿತ್. ನಮ್ಮ ಕುಳ್ಳ ಸ ಇತ್. ಕೇರಿಯ ಮಕ್ಕ ಎಲ್ಲ ಸೇರಿಕಂಡ್ ಪಟಾಕಿ ಹೊಡ್ಸಿಕಂಡ್ ಇದ್ದೊ. ಆಗ ಇಂದ್ನಂಗೆ ತರಾವರಿ ಪಟಾಕಿಗ ಇತ್ಲೆ. ರೀಲು ಪಟಾಕಿನ ಸಣ್ಣ ಸಣ್ಣ ಚೂರು ಮಾಡಿ ಚೆಡ್ಡಿ ಜೇಬಲಿ ಇಸಿಕಂಡ್ ಅದರ ಕಲ್ಲ್‌ಲಿ ಕುಟ್ಟಿ ಹೊಡ್ಸಿ ಆಟ ಆಡ್ತಿದ್ದೊ.

ಅಷ್ಟೊತ್ತಿಗೆ ಊಟಕೆ ಕರೆ ಬಾತ್ ಎಲ್ಲ ಮಕ್ಕ ಖುಷಿಲಿ ಕುಣ್ಕಂಡ್ ಹೊರಗೆ ಇಟ್ಟ ಮಡಿಕೆ ನೀರ್ಲಿ ಕೈ ತೊಳ್ದ್ ಸಾಲ್‌ಲಿ ಕುದ್ದೊ. ನಮ್ಮ ಕುಳ್ಳ ಸ ಅಲ್ಲೆ ಗೋಡೆಗೆ ಒರ್ಗಿ ಕುದ್ದತ್ ಅವಂಗೆ

ಏನನ್ನಿಸತೊ ಗೊತ್ತ್ಲೆ ಚೆಂಡಿ ಕೈಲಿ ಚೆಡ್ಡಿ ಜೇಬಿಗೆ ಕೈ ಹಾಕಿತ್. ಆಗ ಒಂದು ಸಣ್ಣ ಪಟಾಕಿ ಚೂರು ಕೈಗೆ ಅಂಟಿತ್. ಅಂವ ಅದರ ಗಮನ್ಸಿಲ್ಲೆ. ತಟ್ಟೆಗೆ ಹೋಳಿಗೆ ಬಿದ್ದಂಗೆ ಕೈ ಹಾಕಿ ಬಾಯಿಗೆ ಇಸಿತ್ ನೋಡಿ.

ಢಂ!!!!! ಎಂತ ದವಡೆಲಿ ಹೊಡ್ತ್

ಅದರ ಮೇಲೆ ಕುಳ್ಳನ ಬಾಯಿಂದ ಮಾತ್ನ ಕೇಳ್ದೊವೇ ಕಮ್ಮಿ. ಪ್ರತಿ ದೀಪಾವಳಿ ಹಬ್ಬ ಬಾಕನ ತಪ್ಪದೇ ನಮ್ಮ ಈ ಕುಳ್ಳ ನೆನ್ಪಾಗೆದೆ ಇರ್ದುಲೆ

## ಚಾಮಿ ತಾತ

ಚಾಮಿ ತಾತ ಒಮ್ಮೆ ಅಣ್ಣನ ಮ್ಂಜನ ಮದ್ವೆಗೆಂತ ಬೆಂಗ್ಳೂರಿಗೆ ಹೊರ್ಟತ್. ಅಣ್ಣನ ಮಂಜ ಅಲ್ಲಿಂದಲೇ ರಾಜಹಂಸ ಬಸ್ಲಿ ಟಿಕೇಟ್ ಬುಕ್ ಮಾಡಿ ಇಸಿತ್ ಕತ್ತಲೆಗೆ ಚಾಮಿ ತಾತ ಮೀದ್ ದೇವರ ದೀಪ ಇಸಿ ಅಜ್ಜಿಗೆ ಹೇಳಿ ಚೀಲ ತುಂಬ್ಸಿ ದಾರಿಗೆ ಸ್ವಲ್ಪ ತಿಂಡಿ ಕಟ್ಟಿಕಂಡ್ ಹೊರ್ಟತ್.

ಸರಿಯಾಗಿ 9 ಗಂಟೆಗೆ ಬಸ್ ಬಂದ್ ಚೆಟ್ಟುಟಿಮಾನಿಲಿ ನಿಂತತ್ ಇಲ್ಲಿನ ರಾಮ ವಿಜಯಲಕ್ಷ್ಮಿ ಬಸ್ಲಿ ಹತ್ತಿ ಟಿಕೆಟ್ ಮಾಡ್ತಿದ್ದ ತಾತಂಗೆ ರಿಸರ್ವೇಶನ್ ಬಗ್ಗೆ ಗೊತ್ತಿತ್ಲೆ. ಟಿಕೆಟ್ ಕೈಲಿ ಹಿಡ್ಕಂಡ್ ಸೀಟ್ ಎಲ್ಲಿ ಖಾಲಿ ಉಟ್ಟು ತ ನೋಡ್ತಾ ಇತ್. ಆಗ ಕಂಡಕ್ಟರ್ ಬಂದ್ ಇವರ್ನ ಕರ್ಕಂಡ್ ಹೋಗಿ ಒಂದ್ ಸೀಟ್ಲಿ ಕೂರ್ಸಿ ಇದೇ ನಿಮ್ಮ ಜಾಗ ಪಕ್ಕಕ್ಕೆ ಚೇರಂಬಾಣೆಲಿ ಜನ ಬಂದವೆ ತ ಹೇಳಿ ಹೋತ್.

ಇದೆಂತಪ್ಪಾ ಬಸ್ ಹತ್ತಿದಂಗೆ ಕಂಡಕ್ಟರ್ ಹೇಳ್ದ ಜಾಗಲೇ ಕೂರಕಲ ತ ಸಿಟ್ಟು ಬಂದರೂ ಸುಮ್ಮನೆ ಕುದ್ದತ್. ಬಸ್ ಹೊರ್ಟ್ ಸ್ವಲ್ಪದರ್ಲೆ ಆ ಕಡೆ ಈ ಕಡೆ ಜನ ತುಂಬಿದೊ. ಬಸ್ ಹಂಗೆ ಘಾಟಿ ಏರ್ತಾ ಏರ್ತಾ ಇಂದಂಗೆ ಎಲ್ಲವ್ಕೆ ನಿದ್ದೆ ತೂಗ್ತಾ ಇತ್ತ್ ಮುಂದೆ ಸಾಲ್‌ಲಿ ಸೀಟ್ ಖಾಲಿ ಇತ್ ತಾತ ಅಲ್ಲಿಗೆ ಹೋಗಿ ಕುದ್ದನೆ ತ ಗ್ಯಾನ ಮಾಡ್ತ್ ಅಲ್ಲಿಗೆ ಒಂದ್ ಜೋಡಿ ಬಂದ್ ಕುದ್ದೊ. ಕುದ್ದವೆ ಪುಷ್ ಬ್ಯಾಕ್ ಸೀಟ್‌ನ ಹಿಂದಕೆ ಒತ್ತಿ ಕುದ್ದೊ, ಪಾಪ ಇದ್ಯಾದರ ಅರಿವಿಲ್ಲದ ನಮ್ಮ ಚಾಮಿ ತಾತ ಕಣ್ಣ್ ಕಣ್ಣ್ ಬುಟ್ಕಂಡ್ ಕುದ್ದತ್ ಆಚೆ ಈಚೆ ಎಲ್ಲ ನಿದ್ದೆಗಡಲಿ ತೇಲ್ತಾ ಇದ್ದೊ ಮುಂದಿನ ಸೀಟ್ ಬಗ್ಗಿ ಅವರ ಎದೆಗೆ ಒತ್ತಿಕೊಂಡಿತ್ತ್, ತಾತ ಅವರ ಸೀಟ್‌ನ ಹಿಂದಕ್ಕೆ ಮಾಡಿದ್ರೆ ಆಗಿತ್ತೇನೊ. ಆದರೆ ಅವ್ಕೆ ಇದರ ಬಗ್ಗೆ ಗೊತ್ತಿದ್ರೆ ಅಲ್ಲ.. ಆಗೊಮ್ಮೆ ಈಗೊಮ್ಮೆ ಮಾಮೂಲಿ ಬಸ್ಲಿ ದೂರ ಪ್ರಯಾಣ ಮಾಡ್ತಿದ್ದ ತಾತ ಅಣ್ಣನ ಮ್ಂಜನ ಮಾತ್ ಕೇಳಿ ಈ ಬಸ್ಲಿ ಬಾತ್. ಆದರೆ ಈ ಪಜೀತಿಲಿ ಸಿಕ್ಕಿಕಣ್ತ್ ಯಾರ್ನಾದರ್ ಕೇಳ್ನೋ ತೇಕ್ರೆ ಪಕ್ಕಲಿ ಎಲ್ಲ ಭಯಂಕರ ನಿದ್ದೆಲಿ ಇದ್ದೊ.

ತಾತಂಗೆ ಉಸಿರು ಕಟ್ಟಿದಾಂಗ್ಗಾಗಿ ಕೂರಿಕೆ ಬೊತ್ತಾಗಿತ್ತ ಹಂಗೆ ಹಿಂಗೆ ಕುಶಾಲನಗರದ ತಲ್ಪಿತ್. ಇನ್ನು ಆದೇಲೆ ತೇಳಿ ಹಂಗೆ ಬಗ್ಗಿ ಕರ್ದೊ. ತಮ್ಮಕಷ್ಟ ಹೇಳ್ದೊ ಕಂಡಕ್ಟರ್ ಎಷ್ಟೇ ಸಮಧಾನ ಮಾಡ್ರು ಕೇಳ್ತೇಲೆ ಸೀಟ್‌ನ ಬಗ್ಗಿಸಿ ತೋರ್ಸಿತ್. ಆದರೆ ತಾತ ನಾ ದಮ್ಮು ರೋಗಿ ಉಸಿರಾಡಿಕಾಲೆ ಹಿಂಗೆ ಕುದ್ದರೆ ಸತ್ತೇ ಹೋನೆ ತ ಹೇಳ್ದೊ.

ಕಂಡಕ್ಟರ್ಗೆ ಒಮ್ಮೆಗೆ ನಿದ್ದೆ ಹಾರಿ ಹೋಗಿ ಹೆದರಿಕೆ ಶುರು ಆತ್. ಹೇಂಗೋ ಡ್ರೈವರ್

ಹಿಂದಿನ ಸೀಟ್ ಕುದವ್ರ ಏಳ್ಸಿ ತಾತಂಗೆ ಜಾಗ ಮಾಡಿ ಕೊಡ್ಸಿತ್ ಮುಂದೆ ಯಾವ ಸೀಟ್‌ದ ಅಡ್ಡಿ ಇಲ್ಲದೆ ತಾತ ಲಾಯ್ಕ ನಿದ್ದೆ ಮಾಡಿಕಂಡ್ ಬೆಂಗ್ಳೂರ್ ಸೇರ್ತ್

ಕಂಡಕ್ಟರ್ ಸಃ ನಿಟ್ಟುಸಿರ್ ಬುಟ್ಟ್ ನಿದ್ದೆ ಜಾರ್ತ್

## ಕ್ಯಾಮರ

ನಾವು ಏಳನೆ ತರಗತಿಲಿ ಇರ್ಕಾಕನ ಬೋರ್ಡ್ ಪರೀಕ್ಷೆ ಇದ್ದ ಕಾಲ ಅದ್ ತಾಲೂಕಿಗೆ ಇದ್ದ ಒಂದೇ ಆಂಗ್ಲ ಮಾಧ್ಯಮ ಶಾಲೆ ನಮ್ಮದಾಗಿತ್ತ್ ಆದರೆ ಪರೀಕ್ಷೆಗೆ ಮಾತ್ರ ನಾವು ಪಕ್ಕದ ಹಳ್ಳಿ ಶಾಲೆಗೆ ಹೋಕಾಗಿತ್ತ್ ಮೊದಲ ಪರೀಕ್ಷೆಗೆ ನಾವೆಲ್ಲ ಸೇರಿ ಸೈಕಲ್‌ಲಿ ಹೊರ್ಟ್ವೊ.

ಹಳ್ಳಿ ತೇಲ್ರೆ ಬರೀ ಹಳ್ಳಿ ನಾಲ್ಕೇ ನಾಲ್ಕ್ ಕೋಂಬರೆ ಇರ್ವ ಶಾಲೆ ನಮ್ಮದ್ ಮೂರನೆ ಕೋಂಬರೆ ನಮ್ಮ ಜಾಗೆನ ಹುಡ್ಕಿ ಕುದ್ದೊ, ಕೊನೆಯಕ್ಷಣಲಿ ಪುಟಗಳ ತಿರುವಿಕಂಡ್ ಇದ್ದೊ ಆ ಕಡೆ ಈ ಕಡೆ ಬೇರೆ ಮಕ್ಕ ಚೀಟಿ ಬರ್‍ರ್ಯೊದರ್ಲಿ ಮಗ್ನರಾಗಿದ್ದೊ. ಹಂಗೆ ಇರ್ಕನ ನಮ್ಮ ಗಮನ ಹಿಂಬದಿ ಗೋಡೆ ಮದ್ಯಲಿ ಇದ್ದ ಕ್ಯಾಮರ ಮೇಲೆ ಬಿತ್ತ್. ನಾವು ನೋಡ್ದರ್ನ ನೋಡಿ ಎಲ್ಲವೂ ಅಲ್ಲಿ ನೋಡಿಕೆ ಶುರು ಮಾಡ್ದೊ ನಕಲಿ ಚೀಟಿ ಬರೆತ್ತಿದವರ ಎದೆ ಡಗ್ ತ ಹೇಳ್ತ್ ಅಷ್ಟರವರೆಗೆ ಯಾರ್ರು ಅದರ ಕಂಡಿತ್ಲೆ

ಓಹೊ ಇದೆಂತಪ್ಪ ಈ ಶಾಲೆಲಿ ಪರೀಕ್ಷೆಗೆ ಕ್ಯಾಮರಾನ ಇಟ್ಟೊಳೊ. ನಮ್ಮ ದೊಡ್ಡ ಶಾಲೆಲಿ ಇಲ್ಲದ ವ್ಯವಸ್ಥೆ ಇಲ್ಲುಟ್ಟಲ ತಾ ಒಮ್ಮೆ ಅನ್ಸಿತ್. ಅದರ ಮೇಲೆ ಯಾರ್ ಸ ತಲೆ ಎತ್ತಿತ್ಲೆ. ಪರೀಕ್ಷೆ ಶರು ಆತ್. ಇನ್ವಿಜಿಲೇಟರ್ ಬಂದ್ "ಯಾರ್ ಸ ನಕಲು ಮಾಡಿಕಾಗದ್, ಯಾರಾರ್ ಸಿಕ್ಕಿ ಹಾಕಂಡ್ರೆ 3 ವರ್ಷ ಮನೇಲೆ ಕೂರಕು" ತ ಹೇಳಿ ಹೋದೊ.

ಯಾವೊಬ್ಬ ಸ ಪರೀಕ್ಷೆ ಮುಗಿಯೊ ಮುಟ್ಟ ತಲೆ ಎತ್ತಿ ಸ ನೋಡ್ತೆಲೆ. ಓರೆ ಕಣ್ಣ್‌ಹಳ್ಳಿ ಕ್ಯಾಮರ ನೋಡ್ತಿದ್ದೋ ಬುಟ್ಟರೆ ಉತ್ತರ ಪತ್ರಿಕೆ ಅಷ್ಟೆ .ಅಷ್ಟರ ಮಟ್ಟಿಗೆ ಆ ಕ್ಯಾಮರ ನಮ್ಮ ಪ್ರಭಾವ ಬೀರಿತ್ತ್.

ಅಂದ್ ವಾಪಾಸ್ ಬಂದ ಮೇಲೆ ಬೇರೆಯವ್ಕೆ ಅಲ್ಲಿನ ಪರಿಸ್ಥಿತಿ ಹೇಳಿ ಅವು ಅಲ್ಲಿಗೆ ಬಾರದೆ ಇದ್ದದ್ದೇ ಒಳ್ಳೆದಾತ್ ತ ಹೇಳಿಕಂಡೋ. ಎಲ್ಲವ್ಕೆ ತಲೆ ಬಿಸಿ ಆದ್ ಲೆಕ್ಕದ ದಿನ ಏನ್ ಮಾಡ್ದು ತಾ ಅಂತ ನಕಲು ಮಾಡವು ಯಾರೂ ಇತ್ಲೆ ಆದರು ಎಲ್ಲಾರ್ ಪ್ರಶ್ನೆ ಪತ್ರಿಕೆ ಕಷ್ಟ ಇದ್ದರೆ ತಾ ಅಷ್ಟೆ.

ಹಂಗು ಹಿಂಗು ಆ ಕ್ಯಾಮರ ನಮ್ಮನ ನಿಯತ್‌ಂದ ಪರೀಕ್ಷೆ ಬರ್ಸಿತ್. ಅಷ್ಟ್ ಕಷ್ಟ ಏನಿತ್ಲೆ. ಎಲ್ಲವು ಪಾಸ್ ಆಗಿ ಹೈಸ್ಕೂಲಿಗೆ ಬಂದೊ ಆಗ ತರಗತಿಲಿ ಹಿಂಗೆ ಮಾತಾಡ್ಕನ ನಮ್ಮ ಕನ್ನಡ ಮಾಸ್ರ್ ಹೇಳ್ದ ಮಾತ್ ನಮ್ಮೆಲ್ಲರನ್ನ ದಂಗ್ ಬಡ್ಸಿತ್.

ಅದೇನ್ ಹೇಳ್ರೆ ಹಳ್ಳಿ ಮಕ್ಕ ಇಲ್ಲಿಗೆ ಬಂದರೆ ಹೆದ್ರಿಕೆಲಿ ಕಾಫಿ ಮಾಡ್ಲೆ ಹಂಗೆ ಇಲ್ಲಿನವು ಅಲ್ಲಿ ಕಾಪಿ ಮಾಡಿಕಾದ್ ತ ಕ್ಯಾಮರಾನ ಇಸಿದ್ ಗಡ.

ಆದರೆ ಆ ಕ್ಯಾಮರಕೆ ಹೋಗಲಿ ಇಡೀ ಶಾಲೆಗೆ ಕರೆಂಟ್ ವ್ಯವಸ್ಥೆ ಇತ್ಲೆ ಗಡ

ಗುಮ್ಮ.

ಪ್ರಚಂಡ ಕುಳ್ಳ ಗಂಧದ ಗುಡಿ, ಸಿಂಹದ ಮರಿ ಸೈನ್ಯ ಹಿಂಗೆ ಇನ್ನೂ ಸಾಹಸಮಯಿ ಚಿತ್ರಗಳ್ಲಿ ಬರುವ ಸುರಂಗ ಮಾರ್ಗ ತೇಳ್ರೆ ಹಳೇ ದೇವಸ್ಥಾನದಲಿ ಇರೋ ಯಾವ್ದಾದರ್ ಮೂರ್ತಿನ ತಿರ್ಗಿಸಿರೆ ಅದರ ಅಡಿಲಿ ಒಂದು ಸುರಂಗ ಮಾರ್ಗ ತೆರ್ದ್ಯೊದು. ಆದರೆ ಒಳಗೆ ಏನಾದರ್ ವಿಶೇಷ ವಸ್ತುಗ ಇರ್ದು ಹಿಂಗೆ ಈ ತರದ ವಿಚಾರಗ ನಮ್ಮ ಮೇಲೆ ಬಹಳ ಪ್ರಭಾವ ಬೀರಿತ್.

ಹಿಂಗೆ ನಮ್ಮ ಸೈಕಲ್ ಸವಾರಿ ಗ್ಲಲಿ ಗಲ್ಲಿ ಬುಟ್ಟು ಊರ್‌ನ ಮೂಲೆಲಿ ಇದ್ದ ಜೋಳದ ಗದ್ದೆಗೆ ಸಾಗಿತ್ ಆಗ ನಮ್ಮ ತಂಡಲಿ ಆದಿತ್ಯ, ಚೈತ್ರ, ಕಾವ್ಯ, ವಿಜಯ್ ಮತ್ತೆ ನಾನು ಗದ್ದೆ ಮಧ್ಯೆ ಇದ್ದ ಏರಿಳಿತದ ಪಾತಿಗಳ್ಲಿ ಸೈಕಲ್ ಓಡ್ಸುದು ತೇಳ್ರೆ ಒಂದು ರೋಮಾಂಚನಕಾರಿ ಅನುಭವ.

ಅದು ಹೆಚ್ಚು ಜನ ಸಂಚಾರ ಇಲ್ಲದ ಜಾಗ ಆ ಹೊಲದ ಮೂಲೆಲಿ ಮೂರು ಗುಡಿಗ ಇತ್ತ್ ಸೈಕಲ್ನ ಅದರ ಬದಿಲಿ ನಿಲ್ಸಿ ಒಳಗೆ ಇಣುಕಿ ನೋಡ್ದೊ, ಸಣ್ಣ ಕೋಂಬರೆ ಅದರ ಮಧ್ಯೆ ಒಂದು ಪೀಠ ಅದರ ಮೇಲೆ ಒಂದು ನಂದಿಯ ಮೂರ್ತಿ ಇತ್ತ್ ಅದರ ಕೆಳಗೆ ಒಂದು ಸಣ್ಣ ದೀಪ ಉರಿತಾ ಇತ್ತ್ ಅದರ ಕೆಳಗೆ ಒಂದು ಸಣ್ಣ ದೀಪ ಉರಿತಾ ಇತ್ತ್.

ನಮ್ಮ ಹುಚ್ಚು ಮನ್ಸ್ ಕೆಲಸ ಮಾಡಿಕೆ ಶುರು ಮಾಡ್ತ್ ಸುತ್ತ ಮುತ್ತ ಏನು ಇಲ್ಲೆ ಆದರು ಯಾಕೆ ಹೀಂಗೆ ಮೂಲೆಲಿ ಯಾರು ಇಲ್ಲದ ಜಾಗಲಿ ಇಂತ ಗುಡಿಗಳ ಕಟ್ಟ್ಯೊಳ ತ ಎಲ್ಲ ಗ್ಯಾನ ಮಾಡಿಕೆ ಶುರು ಮಾಡ್ದೊ.

ಅಷ್ಟ್ರಲಿ ಒಳಗೆಂದ ಊಂಂಂಂಂಂಂಂ–ಊಂಂಂಂಂಂಂಂಂಂ– ಊಂಂಂಂಂಂಂಂ ತಾ ಸದ್ದು ಬಾಕೆ ಶುರು ಆತ್ ಕೇಳ್ತಿದಂಗೆ ಎಲ್ಲವುಕೆ ನಡುಕ ಶುರು ಆತ್. ಹೆದ್ರಿಕೆಲಿ ಅತ್ತಿತ್ತ ನೋಡದೆ ಎದ್ದನೋ ಬಿದ್ದನೋ ತಾ ಅಲ್ಲಿಂದ ಮನೆ ಕಡೆ ಓಡ್ದೊ.

ಅಂದ್ ಹಿಂಬಡ್ತಿಗೆ ನಾವು ಮಾಮೂಲು ಸೇರೋ ಜಾಗೆಲಿ ಸೇರ್ದೊ ಅಲ್ಲಿ ಕುದ್ಕಂಡ್ ಇದರ ಬಗ್ಗೆ ಚರ್ಚೆ ಮಾಡಿಕೆ ಶುರು ಮಾಡ್ದೊ ಒಳಗೆ ಇರ್ದು ಕಂಡದೆ ಅದಕ್ಕೆ ಏನೋ ಹಂಗೆ ಸದ್ದ್ ಬಂದದ್ ಅಲ್ಲರೋ ನಂದಿನ ತಿರ್ಗಿಸಿರೆ ಒಳಗೆ ಸುರಂಗ ಏನಾರ್ ತೆರ್ಯದ? ಒಳಗೆ ಹೋಕೆ ಮೆಟ್ಟಲ್ಗ ಇರ್ದ? ಇಲ್ಲೆ ಹಾಂಗೆ ಖಾಲಿ ಜಾಗನ? ಯಾರ್ಯಾರ್ ಅಲ್ಲಿಂದ ಬಂದರೆ ಒಂದು ಕುಪ್ಪಿಲಿ ಮೆಣ್ಸುಪುಡಿ ಇಸಿಕಣೊ. ಹಾಂ ಒಂದು ದಪ್ಪ ಬೊಣ್ಣೆ ಇರ್ಲಿ. ಬೇಕಾದೆ. ಹೀಂಗೆ ನಮ್ಮ ಹುಚ್ಚು ಮಾತುಗ ಮುಂದುವರಿತಾ ಇತ್ತ್. ಹೀಂಗೆ ನಮ್ಮ ಯೋಚನೆಗಳ್ಲೇ ಅಂದ್ ಕಾಲ ಕಳ್ತ್.

ನಾಳೆ ಎಲ್ಲ ಸಿದ್ದ ಮಾಡಿಕಂಡ್ ಅಲ್ಲಿ ಪೋಯಿ

ಯಾರ್ಗೂ ಹೇಳ್ದು ಬೇಡ. ಆರಹಸ್ಯನ ಭೇಧಿಸುಕುತ ಗ್ಯಾನ ಮಾಡಿಕಂಡ್ ಮನೆ ಕಡೆ ಹೊರ್ಟೊ.

ಮನೆಗೆ ಬಂದರೂ ಸಹ ಆ ಸದ್ದ್ ಎಲ್ಲಿಂದ ಬಾತ್ ಯಾಕೆ ಬಾತ್ ಆ ಮೂಲೆಲಿ ಹಂಗೆ ಗೋಪುರಗಳ್ನ ಕಟ್ಟೊಳೋಂತೇಳ್ದು ಮನ್ಸ್‌ಲಿ ಕೊರಿತಾ ಇತ್ತ್. ನಾನು ಅಲ್ಲಿಗೆ ಹೋಗಿದ್ದೆ ತೇಳ್ರೆ ಮನೆಲೊ ಬೈಗುಳ ಸಿಕ್ಕಿದೆ, ಅದ್ಕೆ "ಆದಿತ್ಯನ ತಂಗೆ ಹಿಂಗೆ ಅಲ್ಲಿಗೆ ಹೋಗಿತ್ ಗಡ, ಅಲ್ಲಿ ಗೋಪುರ ಇತ್ತ್ ಅದರ್ಲಿ ಹಿಂಗೆಲ್ಲಾ ಸದ್ದುಗ ಬರ್ತಿತ್ ತಾ ಹೇಳ್ದೆ.

ಆದರೆ ಮಂಜನ ಬುದ್ದಿ ಗೊತ್ತಿದ್ದ ಅಮ್ಮ ಕಿವಿ ಹಿಂಡಿ ಹಂಗೆಲ್ಲಾ ಅಲ್ಲಿಗೆ ಹೋಕಾದ್.

“ಅದ್ ಸ್ಮಶಾನ, ಆ ಗೋಪುರಗ ಸಮಾಧಿಗ, ಮತ್ತೆ ನೀವು ಕೇಳ್ದ ಸದ್ದ್ ಯಾವ ದೆವ್ವಗಳ್ದ್ ಅಲ್ಲ ಅದ್ ಪಾರಿವಾಳಗ ಹಂಗೆ ಕೂಗುದು ' ತಾ ಹೇಳ್ದೋ.

ಅಲ್ಲಿಗೆ ನಮ್ಮ ಕುತೂಹಲಕ್ಕೆ ತಣ್ಣೀರ್ ಎರ್ಚಿದಂಗೆ ಆತ್.

## ಐಸ್ ಕ್ರೀಂ

ಕಂದ, ಕುಳ್ಳು ಮತ್ತೆ ಬಾಗಿ ಬೆಂಗಳೂರಿಗೆ ಬಂದ ಸುರು. ಭಾನುವಾರ ರಜೆ ಆದ್ದರಿಂದ ಕೋಂಬರೆಲಿ ಕುದ್ರಿಕೆ ಬ್ಯಾಜಾರ್ ಆಗಿ ಹಂಗೆ ಹೊರಗೆ ಸುತ್ತಿಕೆ ಹೊರ್ಟೋ. ಬೆಂಗಳೂರು ಎಷ್ಟು ಸುತ್ತಿರೂ ಮುಗಿಯದ ಊರು. ಸುತ್ತಿ ಸುತ್ತಿ ಸಾಕಾಗಿ ಮದ್ಯಾಹ್ನ ಒಂದು ಮಾಲ್‌ನ ಒಳಗೆ  ಹೋದೊ. ಮಾಲ್ ಗ ಜೇಬು ಗಟ್ಟಿ ಇದ್ದವ್ಕೆ ಮಾತ್ರ, ಇಲ್ಲರೆ ಬರೀ ಕಣ್ಣೋಟಕ್ಕೆ ಅಷ್ಟೆ

ಇವು ಎಲ್ಲಾ ಅಂಗಡಿಗಳ್ನ ನೋಡಿಕಂಡ್ ಅಲ್ಲಿದ್ದ ಹೊಸ ಹೊಸ ಬಗೆ ಚಪ್ಪಲಿ, ಬಟ್ಟೆ, ಸೌಂದರ್ಯ ವರ್ಧಕ ವಸ್ತುಗಳ್ನ ನೋಡಿಕಂಡ್ ಮೇಲಿನ ಮಾಡ್‌ಗೆ ಬಂದೋ. ಅಲ್ಲಿ ನೋಡ್ರೆ ಅದ್ ಕೆಫೆಟೇರಿಯ ಆಗಿತ್.

ಬೊಳ್ಪುಂದ ಸುತ್ತಿ ಸುತ್ತಿ ಸುಸ್ತಾಗಿ ಹಸಿವಾಗಿ ಬೊತ್ತ್‌ಅದ್ಕೆ ಸರಿಯಾಗಿ ಅಲ್ಲಿಂದ ಗೋಬಿ ಮಂಚೂರಿ, ಪಾನಿಪೂರಿ, ಪಿಜ್ಜಾ ಗಮಗಮತಾ ಮೂಗಿಗೆ ಬಂದ್ ಬಡಿತಿತ್. ಇವ್ಕೆ ಬಾಯಲಿ ನೀರ್ ಬಾಕೆ ಶುರು ಆತ್. ಹಂಗೆ ಅತ್ತಿತ್ತ ನೋಡಿ ಒಂದು ಅಂಗಡಿಗೆ ಹೋದೋ. ಅಲ್ಲಿನ ದರ ಪಟ್ಟಿ ನೋಡ್ದಂಗೆ ತಲೆ ತಿರ್ಗಿಂದಂಗೆ ಆತ್.

ಇಷ್ಟ್ ಸಣ್ಣ ತಿಂಡಿಗೆ ಇಷ್ಟು ಕೊಡುಕಾತಾ ಬಾಯಿ ಬುಟ್ಟ್ ಕಂಡ್ ಕುದ್ದೋ. ಅವ್ಕೆ ಕಾಲಿ ಹೊಟ್ಟೆಲಿ ವಾಪಸ್ ಹೋಕೆ ಮನ್ಸ್ ಬಾತ್ಲೆ. ಆ ಕಡೆ ಈ ಕಡೆ ನೋಡ್ಕನ ಮೂಲೆಲಿ ಒಂದು ಸಣ್ಣ ಐಸ್ ಕ್ರೀಂ ಅಂಗಡಿ ಕಂಡತ್. ಮೊದ್ಲೇ ಕಂದಂಗೆ ಐಸ್‌ಕ್ರೀಮ್‌ತೇಳ್ರೆ ಜೀವ. ಅಲ್ಲಿಗೆ ಪೋಯಿತ ಹೇಳ್ತ್, ಮೂರು ಜನ ಅಲ್ಲಿಗೆ ಹೋಗಿ ಕುದ್ದೋ. ಅಲ್ಲಿ ನೋಡ್ರೆ ತರಾವರಿ ಐಸ್ ಕ್ರೀಂಗ ಉಟ್ಟು, ನೋಡಿ ನೋಡಿ ಕಡೆಗೆ ಎಲ್ಲವೂ ಒಂದೊಂದು ತರದ್ನ ತಕಂಡೋ. ಅದ್ ಇದ್‌ತಾ ಮಾತಾಡಿಕಂಡ್ ತಿಂಬಕನ ಅಂಗಡಿಯಂವ ಬಿಲ್ಲ್ ಇಸಿ ಹೋತ್. ಬಿಲ್ಲ್ ನೋಡ್ರೆ ಬರೀ 467 ರುಪಾಯಿ ಅಷ್ಟೆ. ಏ! ಎಂತ ಇದ್ “ಕುಳ್ಳು ಸರಿ ನೋಡ್ನೆ ಅದ್ ಬೇರೆಯವರ್ದ್ ಇರಕು” ಕಂದ ಸಲಹೆ ಕೊಟ್ಟತ್, ಮತ್ತೆ ಮತ್ತೆ ನೋಡ್ರೂ, ಅಕ್ಷರ ಅಕ್ಷರ ಓದಿರು 467 ಏ ತಣ್ಣನೆ ಈಸ್ ಕ್ರೀಮ್ ಈಗ ಯಾಕೊ ಬಿಸಿ ಕಷಾಯದ ಅನುಭವ ಕೊಡ್ತಾ ಉಟ್ಟು.

ಎಲ್ಲವು ಎಷ್ಟ್ ತುಡ್ಕಿರೂ 300 ರುಪಾಯಿ ಮೇಲೆ ಒಂದು ಪೈಸೆ ಸ ಇಲ್ಲೆ. ಈಗೆಂತ ಮಾಡ್ದಪ್ಪಾ ತಾ ಗ್ಯಾನ ಮಾಡ್ಕನ ಒಂದು ಉಪಾಯ ಹೊಳ್ತ್. ಮೆಲ್ಲ ಕುಳ್ಳುನ ಕೋಂಬರೆಗೆ ಹೋಗಿ ದುಡ್ಡು ತಾಕೆ ಹೇಳ್ದೊ. ಅವಿಬ್ಬರೂ ಮೆಲ್ಲ ಮೆಲ್ಲ ತಿಂಬಕೆ ಶುರು ಮಾಡ್ದೊ, ಪಾಪದ ಗೂಡೆ ಕುಳ್ಳು ಓಡ್ಕಿಂಡ್ ಓಡ್ಕಿಂಡ್ ಹೋಗಿ ದುಡ್ಡು ತಾತ್. ಏನು ಆಗದವರಂಗೆ ಬಿಲ್ಲು ಕೊಟ್ಟು ವಾಪ್ಸ್ ಹೊರ್ಟೊ, ಯಾರೊಬ್ಬರ್‌ಸ ಮಾತೇ ಆಡ್ತೇಲೆ ಕೋಂಬರೆಗೆ ಬಂದವೇ ಬಿದ್ದು ಬಿದ್ದು ನಗಾಡಿಕೆ ಶುರು ಮಾಡ್ದೊ. ಅವರ ಬಾಳ ಪುಟಲಿ ಇದೊಂದು ಎಂದೂ ಮಾಸದ ನೆನಪಾಗಿ  ಉಳ್ಕಂತ್.

# ದೊಡ್ಡಯ್ಯ ಗೌಡ್ರ ತಂಗೆ

ಎಂ.ಜಿ. ಕಾವೇರಮ್ಮ

ದೊಡ್ಡ ಮನೆ ದೊಡ್ಡಯ್ಯ ಗೌಡ್ರ್ ಆ ಊರಿಗೇ ಶ್ರೀಮಂತರ್. ಹದ್ನಾರ್ ವೊರ್ಸ ಆಕನನೇ ಅವರ ಅಪ್ಪ ಅವ್ಕೆ ಮೊದುವೆ ಮಾಡ್ಸಿದೊ. ಗೂಡೆಗೆ ಆಗ ಹತ್ತ್ ವೊರ್ಸ. ಗೂಡೆ ದೊಡ್ಡದಾಕನ ಮುಟ್ಟ ತವುರು ಮನೆಲೇ ಇರ್ಲಿಂತ ದೊಡ್ಡಯ್ಯ ಗೌಡ್ರ ಅಪ್ಪ, ಸೊಸೆನ ತವುರು ಮನೆಲೇ ಬುಟ್ಟೊ. ಅವರ್ದ್ ಕಷ್ಟಪಟ್ಟ್ ದುಡ್ಡ ಆಸ್ತಿಯೇನೂ ಅಲ್ಲ. ಪಾಪದೊವ್ಕೆ ಉಂಬಕೆ ತಿಂಬಕೆ ಸಾಲ ಕೊಟ್ಟ್, ಹೇಳ್ದ ಗಡುವಿಗೆ ಕೊಡದಿದ್ದರೆ, ಅವರ ಮನೆಲಿದ್ದದರ ಜಬರ್ ದಸ್ತ್‌ಲಿ ಎಳ್ದ್ ತಕಂಬತಿದ್ದೊ. ಹಾಂಗೂ ಹೀಂಗೂ ಊರ್‌ಗೇ ದೊಡ್ಡ ಕುಳ ಆದೊ. ದೊಡ್ಡಯ್ಯ ಗೌಡ್ರ್ ಪ್ರಾಯಕ್ಕೆ ಬಂದ ಮೇಲೆ ಅವರ ಹಿಡ್ಯೋವೇ ಇತ್ಲೆ. ಅವ್ಕೆ ಹೆಣ್ಣ್‌ಗಳ ಮೊರ್ಳು ಜಾಸ್ತಿ. ಇದ್ ಅವರ ಅಪ್ಪಂಗೆ ಗೊತ್ತಿಲ್ಲದ ವಿಷಯ ಏನೂ ಅಲ್ಲ. ಅದಕ್ಕಾಗಿಯೇ ಅವು ಮೊಂಜಂಗೆ ಬೇಗ ಮೊದ್ವೆ ಮಾಡ್ಸಿದೊ. ಗೂಡೆ ಹದಿಮೂರ್ ವೊರ್ಸಕ್ಕೆ ಪ್ರಾಯಕ್ಕೆ ಬಾತ್. ಮೂರ್ ತಿಂಗ ಕಳ್ದ ಮೇಲೆ ಗೂಡೆನ ಮನೆ ತುಂಬಿಸಿಕಂಡೊ. ಗೂಡೆನೋ ಗಂಡನ ನೋಡ್ರೆ ಹೆದ್ರ್‌ತಿತ್. ದೊಡ್ಡಯ್ಯ ಗೌಡ್ರುನೂ ಅಷ್ಟೆ. ಹೆಣ್ಣ್ ಅವ್ಕೆ ಬೇಕಾದ್ ಮೊಲ್ಗಿಕನ ಮಾತ್ರ. ಬೇರೆ ಹೆಣ್ಣ್‌ಗಳ ರುಚಿ ನೋಡ್ದವ್ಕೆ, ಮನೆ ಹೆಣ್ಣ್ ಅವ್ಕೆ ಹಿಡ್ಸ್‌ತಿತ್ಲೆ. ದೊಡ್ಡಯ್ಯ ಗೌಡ್ರು ಅವರಪ್ಪಂಗೆ ಅವು ಒಬ್ಬನೇ ಮಂಜ ಏನಲ್ಲ. ಅವರ್‌ಂದ ಹತ್ತ್ ವೊರ್ಸಕ್ಕೆ ಸಣ್ಣದ್ ಅವರ ತಂಗೆ ಚೆನ್ನಕ್ಕ. ಅವ್ಕೆ ತಂಗೇಂತೇಳ್ರೆ ಬಾಳ ಪ್ರೀತಿ. ಅವರವ್ವ ಚೆನ್ನಕ್ಕನ ಹೆತ್ತ್ ಸತ್ತತ್. ತಬ್ಬೆಲಿ ಗೂಡೆನ ಸಾಕಿಕೆ ಒಂದು ಬುಡ್ಡೋಳ್ತಿ ಹೆಣ್ಣ್‌ನ ಎಲ್ಲಿಂದಲೋ ಕರ್ಕಂಡ್

ಬಂದೊ ಅವರಪ್ಪ. ಕಡೆಗೆ ಆ ಹೆಂಗ್ಸನನೇ ಅವರಪ್ಪ ಕೈ ಹಿಡ್ಸಿಕೊಂಡೊ. ಇದ್ಕೂ ಯಾರ್ ದಿಕ್ಕಿಲ್ಲೆ. ದೊಡ್ಡಯ್ಯ ಗೌಡ್ರಿಗೆ ಅಂತೂ ಧರ್ಮಕ್ಕೆ ಒಂದು ಚಿಕವ ಸಿಕ್ಕಿತ್. ಮನೆ ಕೆಲ್ಸಕ್ಕೆ ಜನನೂ ಆತ್.

ರಾಮಕ್ಕ ತವುರು ಮನೆಂದ ಗಂಡನ ಮನೆಗೆ ಬಂದ್ ಒಂದು ವೊರ್ಸಾಕನ ದೊಡ್ಡಯ್ಯ ಗೌಡ್ರ ಅಪ್ಪ ಸತ್ತೊದೊ. ಕಾಯ್ಲೆ– ಕಸಾಲೆ ಏನೂ ಇಲ್ಲೆ. ಒಮ್ಮಿಂದೊಮ್ಮೆ ಎದೆ ಬೇನೆ ಬಾತ್. ಸತ್ತೇ ಹೋದೊ. ಇನ್ನ್ ದೊಡ್ಡಯ್ಯ ಗೌಡ್ರ ಹಿಡ್ಯೊವು ಯಾರ್? ಇಪ್ಪತ್ತ್ ವೊರ್ಸಲೇ ಎಜಮಾನ್ಕೆ ಕೈಗ್ ಬಾತ್. ಅವು ಆಡ್ದೇ ಆಟ ಆತ್. ಅವರ ಚಿಕವನೋ ಮಂಜಂಗೆ ಹೆದ್ರಿ ಸಾಯತಿತ್ತ್. ಕೆಲ್ಸಲಿ ದೊಡ್ಡಯ್ಯ ಗೌಡ್ರ್ ಬಾಳ ಬಿರ್ಸ. ಗದ್ದೆ ಹೂಡಿಕೆ ಹೋದರೆ ಎತ್ತ್‌ಗಳಿಗೆ ಬೊಚ್ಚೊಕು ಹೊರ್ತು ಇವ್ಕೆ ಬೊಚ್ಚುತಿತ್ಲೆ. ಮಧ್ಯಾಹ್ನಕೆ ಮುಟ್ಟ ಹೂಡ್ದೇ ಹೂಡ್ದು. ಹೂಟೆ ಮಾಡಿ ಮನೆಗೆ ಬಾಕಾಕನ ಅಡ್ಗೆಮೆನಿ ಹೊತ್ತಿಗೆ ಸರಿಯಾಗಿ ಆತ್ಲರೆ, ಹೂಡುವ ಕೋಲ್‌ಲೇ ಹೆಣ್ಣ್‌ಗುನೂ ಚಿಕವಂಗುನೂ ಬೆನ್ನ್ ಹೊಡಿ ಆಗ್ತಿತ್ತ್ ಅಂತಾ ಅಗ್ರಗಣ್ಣ ಅವು ಆದರೆ ತಂಗೆನ ಮಾತ್ರಾ ಭಾರೀ ಕೊಂಡಾಟಲಿ 'ತಂಗೆವ್ವಾ, ತಂಗೆವ್ವಾ'ಂತ ಕರ್ಯೊತಿದ್ದೊ. ತಂಗೆನೂ ಬಾಳ ಬಿರ್ಸೆತಿ. ಅಣ್ಣಂಗೆ ಸರಿಯಾದ ತಂಗೆ. ಮಾತ್‌ಕತೆ, ಉಂಬೊದಿರ್ಲಿ, ತಿಂಬೊದಿರ್ಲಿ, ಕೆಲ್ಸಲಿ ಯಾವುದರ್ಲಿನೂ ಕಮ್ಮಿ ಇತ್ಲೆ. ಮನೆಗೆ ಅದೇ ಎಜಮಾನ್ತಿ. ಹೀಂಗಿರಿಕನ ಒಂದ್ ದಿನ ತಂಗೆನ ನೋಡಿಕನ ದೊಡ್ಡಯ್ಯ ಗೌಡ್ರಿಗೆ, ಇದ್ಕೆ ಬೇಗ ಮೊದ್ವೆ ಮಾಡಿ ನನ್ನ ಭಾರ ತೀರ್ಸಿಕಣೊಕೊಂತ ನೆನ್ಸಿಕೊಂಡೊ. ಆಗ ಅವ್ಕೆ ನೆಂಪಾದ್ ಅವರ ಭಾವ ನೆಂಟ. ಸರಿ ಅಂವಂಗೇ ಮೊದ್ವೆ ಮಾಡಿಕೊಡ್ದೂಂತ. ಒಂದ್ ದಿನ ಬೆಳ್ಗಾರಾಕನನೇ ಎದ್ದ್ ತಂಗೆನೊಟ್ಟಿಗೆ,

"ತಂಗೆವ್ವಾ, ನಾ ಒಮ್ಮೆ ನನ್ನ ಅತ್ತೆ ಮಾಂವನ ನೋಡಿಕಂಡ್ ಬನ್ನೆ. ಮನೆ ಕಡೆ ಜೋಪಾನ"– ಎಂತ ಹೇಳಿ ಹೆಣ್ಣ್‌ನ ಮನೆಗೆ ಸವಾರಿ ಹೊರ್‍ಟೊ. ಅಲ್ಲಿಗೆ ಅರ್ಧ ದಿನದ ದಾರಿ. ಮಧ್ಯಾಹ್ನ ಊಟದ ಹೊತ್ತಿಗೆ ಮುಟ್ಟಿದೊ. ಅತ್ತೆ–ಮಾಂವಂಗೆ ಅಳ್ಯನ ನೋಡಿ ಕುಸಿ ಆತ್. ಉಪಚಾರ ಮಾಡ್ದೇ ಮಾಡ್ದ್. ದೊಡ್ಡ ಕಟ್ಟದ ಕೋಳಿ ಹುಂಜನ ಬೊಡ್ದ್, ಗೈಪು ಮಾಡ್ದೊ. ಪೊಕ್ಳ ರೊಟ್ಟಿ ಮಾಡ್ದೊ. ಅತ್ತೆ ಅಳ್ಯಂಗೆ ಬಡ್ಸಿದೇ ಬಡ್ಸಿದ್. ಅಳಿಯ ರೊಟ್ಟಿನ ಮುರ್ದ್ ಕೋಳಿ ಗೈಪುಲಿ ತಿಂದದೇ ತಿಂದದ್. ಕುಡ್ಯಕೆ ಹುಳಿ ಕಳ್ಳ್‌ನೂ ಇತ್ತ್. ಅತ್ತೆ ಮಾಂವನ ಪ್ರೀತಿಲಿ ಒಂದು ದಿನ ಕಳ್ದದೇ ಗೊತ್ತಾತ್ಲೆ. ಮೊರ್ದಿನ ಅತ್ತೆ ಮಾಂವನೊಟ್ಟಿಗೆ ಅವು ಬಂದ ಸುದ್ದಿನ ತೆಗ್ದೊ. ತಂಗೆನ ಮೊದ್ವೆ ಮಾಡೋಕು. ಭಾವ ಮೈದಂಗೆ ಕೊಡೊಕೂಂತ ನನ್ನ ಆಸೇಂತ ಹೇಳ್ದೊ. ಇದರ ಕೇಳಿ ಭಾವ ಮೈದಂಗೂ ಬಾಳ ಕುಸಿ ಆತ್. ಅಂವ ಗೂಡೆನ ನೋಡಿಟ್ಟು. ಮೈ ಕೈ ತುಂಬಿಕಂಡ್ ಒಳ್ಳೆ ರಸಬಾಳೆ ಹಣ್ಣ್ ನಂಗೆ ಇತ್ತ್. ದೊಡ್ಡಯ್ಯ ಗೌಡ್ರ ಅತ್ತೆ ಮಾಂವಂಗೂ ಈ ಸಂಬಂಧ ಒಪ್ಪಿಗೆ ಆತ್. ಸುಗ್ಗಿ ಕಳ್ದ ಮೇಲೆ ಮೊದ್ವೆ ಮಾಡೋಮೊಂತ ಮಾತಾಡಿಕೊಂಡೊ.

ದೊಡ್ಡಯ್ಯ ಗೌಡ್ರ್ ಅತ್ತೆ ಮಾಂವನ ಮನೆಂದ ತಿರ್ಗಿ ಬಂದ ಮೇಲೆ ಬಾಳ ಕುಸಿಲಿ ಇದ್ದೊ. ಮನೆಗೆ ಬಂದವೇ ಹೆಣ್ಣ್ ನೊಟ್ಟಿಗೆ,

"ಇಂದನೆ, ನಿನ್ನ ಅಣ್ಣನೊಟ್ಟಿಗೆ ನಮ್ಮ ಚೆನ್ನಕ್ಕನ ಮೊದ್ವೆ ಮಾಡಿಕೊಡ್ದೂಂತ ಮಾತ್

ಕತೆ ತೀರ್ಸಿ ಬಂದಳೆ. ಸುಗ್ಗಿ ಕಳ್ದ ಕೂಡ್ಲೇ ಮೊದ್ವೆ"– ಎಂತ ಹೇಳ್ದೋ. ರಾಮಕ್ಕಂಗೂ ಇದರ ಕೇಳಿ ಬಾಳ ಕುಸಿ ಆತ್. ತವುರು ಮನೆ ಸಂಬಂಧ ಗಟ್ಟಿ ಆದೇಂತ. ಮನೆಲಿ ಸಡಗರ ಸುರು ಆತ್. ಇಜ್ಜಲ್ ಕೆತ್ತಿದ್ದೊ/. ಮನೆನ ಸುತ್ತು ಮುತ್ತೊತ್ತು ಮನಾರ ಮಾಡ್ದೊ. ಮನೆಗೆಲ್ಲಾ ಸುಣ್ಣ ಬಣ್ಣ ಆತ್. ನೆಂಟ್ರ್‌ಗ ಬಂದೊ. ಸಮ್ಮಾನ ಸಾರಿಗೆ ಆತ್. ಇವುವೂ ಗಂಡ ಹೆಣ್ಣ್ ಗಂಡ್‌ನ ಮನೆಗೆ ಮನೆ ನೋಡುವ ಶಾಸ್ತ್ರ ಮಾಡಿಕೆ ಹೋಗಿ ಸಮ್ಮಾನ ತಿಂದ್ ಬಂದೊ. ಒಂದು ಒಳ್ಳೆ ದಿನ ನೋಡಿ, ಪಗ್ಗು ಹದ್ನೆಂಟಕ್ಕೆ ಮೊದ್ವೆಂತ ದಿನ ನಿಶ್ಚಯ ಮಾಡ್ದೊ.

ಮೊದ್ವೆ ದಿನ ಹಕ್ಕಲೆ ಬಾಕಾತ್. ಪೇಟೆಗೆ ಹೋಗಿ ಮೊದೊಳ್ಗೆ ಗೂಡೆಗೆ, ಮನೆವ್ಕೆ ಬೇಕಾದ ಜವುಳಿ ತಂದೊ.ಅಕ್ಕಿ, ಭತ್ತ, ನೆಟ್ಟಿಕ್ಯಾ, ಪದಂಜಿ, ಚಿಬೆರಿ– ಎಲ್ಲಾ ಮನೆಲೇ ಬೇಕಾದಷ್ಟಿತ್ತ್. ಕಾಯೆ ಕೊಟ್ಟ್ ಗಾಣ ಮಾಡ್ಸಿದ ಎಂಣೆನೂ ಇತ್ತ್. ಮನೇಲೆ ಮಾಡ್ದ ಬೆಲ್ಲನೂ ಇತ್ತ್. ಮೆಣ್ಸನೂ ಇತ್ತ್. ಯಾವ್ದಕ್ಕೂ ಹುಡ್ಕೊಕೂಂತ ಇಲ್ಲೆ. ಈಗ ಬೇಕಾದ್ ಬರೇ ಸಂಬಾರ ಸಾಮಾನ್ ಮಾತ್ರಾ. ಅದರ್ರೂ ಪೇಟೆಂದ ತಂದ್‌ದ್ ಇಸಿಕೊಂಡೊ. ಆದರೂ ದೊಡ್ಡೇ ಗೌಡ್ರಿಗೆ ಇರ್‍ಳ್ ಸರಿ ನಿದ್ದೆ ಬಾತಿತ್ಲೆ. ಇರ್ದುರ್ ಒಂದು ತಂಗೆ ಅದರ ಮೊದ್ವೆ ಪೊರ್ಲುಲಿ ಮಾಡೋಕು. ಊಟ ಉಪಚಾರಲಿ ಕಮ್ಮಿ ಆಕೆ ಬೊತ್ತ್. ತಂಗೆವ್ವಾ ತಬ್ಬೆಲಿ ಗೂಡೆ. ಅಪ್ಪ ಅವ್ವ ಇಲ್ಲೆ. ಇಷ್ಟ್ ದಿನ ನನ್ನ ಹಿಂದೆ ಮುಂದೆ ಸುತ್ತುತಿತ್ತ್. ಇನ್ನ್ ಹಂಞ ದಿನಲಿ ಅದರ ಗಂಡನ ಮನೆಗೆ ಕಳ್ಸೊಕೊಲೆ. ಇದರೆಲ್ಲಾ ನೆನ್ಸಿಕಂಡ್ ಅವರ ನಿದ್ದೆ ಹಾರಿ ಹೋತ್. ಅದೇ ಯೋಚನೆಲಿ ಇರ್‍ಳ್ ಎದ್ದ್ ಇಜ್ಜಲಿಗೆ ಇಳ್ದೊ. ಬಿಸ್ನೀರ್ ಕೊಟಗೆನ ಹಕ್ಕಲೆ ಹೋಗಿ, ಮೈ ನೀರ್ ಇಳ್ಸಿಕಂಡ್ ಬಂದೊ. ನಡುಕೋಣೆಲಿ ಅವಿಬ್ರೊರು ಗಂಡ– ಹೆಣ್ಣ್ ಮೊಲ್ಗ್‌ಗಿದ್ದೊ. ಪಕ್ಕದ ಕೋಣೆಲಿ ಚಿಕವನೂ ಮಗಳೂ ಮೊಲ್ಗ್‌ತಿದ್ದೊ. ಒಳಗೇ ಬಂದವೇ ಅವು ಮೆಲ್ಲಗೆ ತಂಗೆ ಮೊಲ್ಗುವ ಕೋಣೆನ ಬಾಕಲ್ ತೆಗ್ದ್, ತಂಗೆನ ಮೋರೆ ನೋಡೊಮೊಂತ ನೋಡ್ದೊ. ಅವರ ಎದೆ ದಸ್ಸ್‌ಂತ ಹೇಳ್ತ್. ಮೊಂದ್ರಿಲಿ ತಂಗೆ ಇತ್ಲೆ. "ಎಲ್ಲಿ ಹೋಗಿರ್ದುರ್? ಹೊರಗೆ ಮೈ ನೀರ್ ಇಳ್ಸಿಕೆ ಹೋಗುಟ್ಟೊ ಏನೋ?"–ಎಂತ ನೆನ್ಸಿ ಅವು ಬಂದ್ ಮೊಲ್ಗಿದೊ. ನಿದ್ದೆ ಬಾತ್ಲೆ. ಎಷ್ಟೊತ್ತಾದರೂ ತಂಗೆ ಬಂದ್ ಅದರ ಕೋಣೆಗೆ ಹೋದ ಸದ್ದ್ ಆತ್ಲೆ. ಅಣ್ಣಂಗೆ ನಿದ್ದೆ ಬಾತ್ಲೆ. ಪಕ್ಕಲಿ ಮೊಲ್ಗಿದ ರಾಮಕ್ಕ ಗೂರ್ಕೆ ಹೊಡಿತಿತ್ತ್. ಅದ್ಕೆ ಮನೆ ಮೇಲೆ ಬಿದ್ದರೂ ಬೇಗ ಎಚ್ಚರ ಆಕಿಲ್ಲೆ. ಹಗಲಿಡೀ ಕೆಲ್ಸ ಮಾಡ್ದ ಜೀವ. ಅದ್ಕೆ ಇತ್ತನ ಗೋಚರನೇ ಇಲ್ಲೆ. ಬೆಳ್ಳಾರಾಕನ ಅಡ್ಗೆ ಕೋಣೆ ಬಾಗ್‌ಲ್ ತೆಗ್ದ ಸದ್ದಾತ್. ತಂಗೆ ಕೊತ್ತಿ ಹೆಜ್ಜೆ ಇಸಿಕಂಡ್ ಬಂದ್, ಆಚೆ ಈಚೆ ನೋಡಿ, ಅದರ ಕೋಣೆಗೆ ಹೋಗಿ ಗುಡಿ ಹೊದ್ದ್ ಮೊಲ್ಗಿತ್. ಇದರೆಲ್ಲಾ ನೋಡ್ದ ದೊಡ್ಡಯ್ಯ ಗೌಡ್ರ್ ಮಾತಾಡ್‌ತ್ಲೆ. ಇನ್ ಹದಿನೈದ್ ದಿನಲಿ ಮೊದ್ವೆ, ಯಾವುದಕ್ಕೂ ದುಡ್ಕಿಕೆ ಬೊತ್ತ್‌ಂತ ಸುಮ್ಮನಾದೊ.

ಮಾರ್ನೆ ದಿನ ಇರ್‍ಳ್ ದೊಡ್ಡಯ್ಯ ಗೌಡ್ರ್ ಕಣ್ಣಿಗೆ ಕಣ್ಣ್ ಮುಚ್ಚಿತಿತ್ಲೆ. ಹನ್ನೆರ್ಡ್ ಗಂಟೆ ಆಕನ ಚೆನ್ನಕ್ಕ ಮೊಲ್ಗಿದ ಕೋಣೆಂದ ಬಾಕಿಲ್ ತೆಗ್ದ ಸದ್ದಾತ್. ದೊಡ್ಡಯ್ಯ ಗೌಡ್ರ್ ಕಣ್ಣ್ ಮುಚ್ಚಿ ಮೊಲ್ಗಿದೊ. ಕೆಬಿನೆಲ್ಲಾ ತಂಗೆನ ಕೋಣೆನ ಕಡೆಗೆ ಕೊಟ್ಟೊ, ಅರ್ಧ ಕಣ್ಣ್‌ಲಿ ನೋಡ್ದೋ. ತಂಗೆ ಮೆಲ್ಲಂಗೆ ಅತ್ತ ಇತ್ತ ನೋಡಿಕಂಡ್ ಅಡ್ಗೆ ಕೋಣೆಗೆ ಹೋಗಿ, ಹಿಂದೆನ ಬಾಕಿಲ್

ತೆಗ್ದ್ ಇಜ್ಜೆಲಿಗೆ ಇಳ್ಡೊ. ಸುತ್ತೋಳೂ ನೋಡ್ದೊ. ತಂಗೆ ಎಲ್ಲಿ ಕಂಡತ್ಲೆ. ಈ ಇರ್‍ಳ್ ಎಲ್ಲಿಂತ ಅದತ ಹುಡ್ಕುದು? ಚೆನ್ನಕ್ಕ ಸರಿ ಇಲ್ಲೆ. ಅದ್ ಮಾಡಿಕೆ ಆಗದ ಏನೋ ಒಂದು ಕೆಲ್ಸ ಮಾಡ್ದೇಂತ ಇವರ ಮೊನ್ನಿಗೆ ಹೊಳ್ತ್. ಇವು ಮಾತಾಡ್‌ತ್ಲೆ. ಒಳಗೆ ಬಂದ್ ಮೊಲ್ಗಿದೊ. ಬೊಳ್ಪಾಕನ ಮುಟ್ಟ ಕಣ್ಣಿಗೆ ಕಣ್ಣ್ ಮುಚ್ಚಿತ್ಲೆ. ಬೆಳ್ಗಾರಾಕನ ಅಡ್ಗೆ ಕೋಣೆ ಬಾಗ್‌ಲ್ ತೆಗ್ದ ಸದ್ದಾತ್. ಚೆನ್ನಕ್ಕ ಕೊತ್ತಿ ಹೆಜ್ಜೆ ಹಾಕಂಡ್ ಬಂದ್ ಅದರ ಕೋಣೆಗೆ ಹೋತ್.

ದೊಡ್ಡಯ್ಯ ಗೌಡ್ರಿಗೆ ಹಗಲ್ ಹೇಂಗೆ ಕಳ್ಯೊದೂಂತ ಗೊತ್ತಾತ್ಲೆ. ಇರ್‍ಳ್ ಕಾದ್ ಕುದ್ದೊ. ಚೆನ್ನಕ್ಕ ಕೋಣೆಂದ ಹೊರ್ಪ ಕೂಡ್ಲೇ, ಎದ್ರ್‌ನ ಬಾಕಿಲ್‌ಂದ ಬೇಗ ಹೋಗಿ ಇಜ್ಜೆಲಿಗೆ ಇಳ್ದ್, ಪುಡೆಲಿದ್ದ ಬಾಳೆ ಪುಂಡೆಲ್ ಅಡಿಲಿ ಅಡಿಂಗಿ ಕುದ್ದೊ. ಇಜ್ಜೆಲಿನ ಪುಡೆಲಿ ಹತ್ತಿಕಂಡ್ ಗುಡ್ಡೆಗೆ ಹೋಕೆ ಹತ್ತ್ ಹನ್ನೆರ್ಡ್ ಮೆಟ್ಲ್ ಇದ್ದ ದಾರಿ ಇತ್ತ್. ಚೆನ್ನಕ್ಕ ಆ ದಾರಿಲಿ ಮೆಟ್ಲ್ ಹತ್ತಿಕಂಡ್ ಗುಡ್ಡೆಗೆ ಹೋತ್. ಇವುನೂ ಅಡಿಂಗಿಕಂಡ್, ಅಡಿಂಗಿಕಂಡ್ ಅದರ ಹಿಂದೆ ಹೋದೊ. ಅದ್ ಹತ್ತ್ ಹದಿನೈದ್ ಮಾರ್ ಗುಡ್ಡೆಲಿ ನಡ್ಕಂಡ್ ಹೋತ್. ಗುಡ್ಡೆಲಿ ಒಂದು ಜೊಂಪುಡಿ ಕಟ್ಟಿಕಂಡ್ ಚುಕ್ರ ಬೈರ ಇತ್ತ್. ಅಂವ ಹೊಂತಗಾರ ಹೈದ. ಎಲ್ಲಿಂದಲೊ ಬಂದಂವ ಗುಡ್ಡೆಲಿ ಜೋಂಪುಡಿ ಕಟ್ಟಿಕಂಡ್ ಅದರ್ಲಿ ಇರ್ತಿತ್. ಸುತ್ತು ಮುತ್ತೊಳು ಇದ್ದ ಜನರಕ್ಕಲೆ ಕೆಲ್ಸಕ್ಕೆ ಹೋಗ್ತಿತ್ತ್. ಕೂಲಿ ಮಾಡಿ ಜೀವನ ಮಾಡ್ತಿತ್ತ್. ಚೆನ್ನಕ್ಕ ಆ ಜೊಂಪ್ಡಿ ಹಕ್ಕಲೆ ಹೋಕಾಕನ ಒಳಗೆಂದ ತಟ್ಟಿ ಬಾಕಿಲ್ ತೆಗ್ದ್, ಚುಕ್ರ ಎರ್ಡ್ ಕೈಲಿ ಎಳ್ಕಂಡ್ ಬಾಕಿಲ್ ಹಾಕಿತ್. ನೆತ್ತೆರ್ ತಲೆಗೆ ಏರಿದಂಗಾತ್. ಆ ಜೋಂಪ್ಡಿಗೆ ಕಿಚ್ಚಿಕೊಟ್ಟರೆ ಹೇಂಗೇಂತ ಯೋಜನೆ ಮಾಡ್ದೊ. ಬೇಡ, ನಾಳೆ ಊರೆಲ್ಲಾ ಸುದ್ದಿ ಆದೆ. ನನ್ನ ಮಾನ ಮೊರ್‍ಯಾದಿ ಹೋದೆ. ಅಲ್ಲೇ ನೆಲಲಿ ಚುದ್ಕರ ಕುದ್ದ್‌ಕಂಡ್, ಎರ್ಡ್ ಕೈಲಿ ತಲೆನ ಗಟ್ಟಿಲಿ ಹಿಡ್ಕೊಂಡೊ. ತಲೆನೇ ಒಡ್ತಿತ್ಲೆ. ಎದ್ದ್ ನಿಂತ್ ಸೀದಾ ಬಿರ ಬಿರನೆ ಮನೆಗೆ ಬಂದೊ. ಚೆಣೆಲಿ ಬಿಟ್ಟದ ಸೆರೆಲಿ ಇಸಿದ ಹೂಡುವ ಕೋಲ್‌ನ ತಕೊಂಡೊ. ಒಳಗೆ ಹೋಗಿ ಮೊಲ್ಗಿಕೊಂಡಿದ್ದ ರಾಮಕ್ಕನ ಮೇಲೆ ಬೀಸಿ, ಬೀಸಿ ಹೊಡ್ದೊ. ನಿದ್ದೆಲಿದ್ದ ರಾಮಕ್ಕ ಹೆದ್ರಿ ಎದ್ದ್ ಕುದ್ದ್, ಕಣ್ಣ್ ಕಣ್ಣ್ ಬುಟ್ಟ್‌ಕಂಡ್ ಗಂಡನ ರೌದ್ರಾವತಾರನ ನೋಡ್ತ್. ಅದ್ಕೆ ಒಂದೂ ಅರ್ಥ ಆತ್ಲೆ. ಅದ್ ಹೊಡಿ ಬೊಡಿ, ಹೊಡಿಬೊಡೀಂತ ಕೈ ಅಡ್ಡ ಹಿಡ್ಕಂಡ್ ಮೊರ್ಪತ್. ಈ ಬೊಬ್ಬೆ ಕೇಳಿ ಕೋಣೆಂದ ಚಿಕವನೂ ಬಂದ್, ಅದ್ಕೆ ಬೊಡಿಬೊಡಾಂತ ಅಡ್ಡ ನಿಂತತ್. ದೊಡ್ಡಯ್ಯ ಗೌಡ್ರು ಚಿಕವಂಗೂ ನಾಕ್ ಬಾರ್ಸಿದೊ.

"ಹಲ್ಕಟ್ ರಂಡೆಗ, ಎಮ್ಮೆಗಳಾಂಗೆ ತಿಂದ್ ಮೊಲ್‌ಗ್ಯಳರಿ. ಮನೆಲಿ ಏನಾದೇಂತ ನೀವ್ಗೆ ಗೊತ್ತುಟೋ?" ಎಂತ ಬೊಬ್ಬೆ ಹಾಕಿದೊ. ಹೆಣ್ಮಕ್ಕ ಇಬ್ಬೊರೊ ಮೋರೆ ಮೋರೆ ನೋಡಿಕೊಂಡೊ.

"ಚೆನ್ನಕ್ಕ ಎಲ್ಲಿ?"– ಎಂತ ದೊಡ್ಡಯ್ಯ ಗೌಡ್ರು ಗರ್ಜಿಸಿದೊ. ಆಗ ಅವ್ಕಿಬ್ಬೊರಿಗೆ ಅರ್ಥ ಆದೆ. ಚೆನ್ನಕ್ಕ ಮನೆಲಿ ಇಲ್ಲೇಂತ.

"ಅದ್ ಅಲ್ಲಿ ಹಾದರ ಮಾಡ್ರೆ, ನೀವಿಲ್ಲಿ ಗೊರ್ಕೆ ಹೊಡ್ದರೆ ನನ್ನ ಮಾನ, ಮೊರ್‍ಯಾದೆ ಎಲ್ಲಾ ಹರಾಜಾತ್"– ಎಂತ ಹೇಳಿ, ಹೂಡುವ ಕೋಲುನ ಬಿಸಾಕಿ, ಬಿರ ಬಿರನೆ ಇಜ್ಜೆಲಿಗೆ

ಇಳ್ದ್, ಗದ್ದೆ ಪುಣಿಲಿ ನಡ್ಕಂಡ್ ಬೈಲಿಗೆ ಹೋದ್ರೊ. ಚಿಕವ ದೊಡ್ಡಯ್ಯ ಗೌಡ್ರಿಗೆ ಶಾಪ ಹಾಕಂಡ್ ರಾಮಕ್ಕನ ಮೈ ಮೇಲೆ ಎದ್ದ ಬಾಸುಂಡೆಗೆ ಕಾಯೆಣ್ಣೆ ತಂದ್ ಪೂಜಿತ್.

"ಇಂವ ತಂಗೆನ ತಲೆ ಮೇಲೆ ಹೊತ್ತ್‌ಕಂಡ್ ಮೆರ್ದತ್. ಈಗ ಗೊತ್ತಾತ್. ನಾವೇನ್ ಮಾಡ್ದು. ನಾವ್ಗೆ ಈ ಮನೆಲಿ ಏನ್ ಬೆಲೆ ಉಟ್ಟು?"– ಇಬ್ಬೊರು ಮೋರೆ ಮೋರೆ ನೋಡಕಂಡ್ ಮಾತಾಡಿಕೊಂಡ್ರೊ. ಬೆಳ್ಜಾರ್‌ಲಿ ಚೆನ್ನಕ್ಕ ಬಂದದೆ. ಅತ್ತಿಗೆನ ಅವಸ್ಥೆನ ನೋಡಿ,

"ಏನಾತ್?"– ಎಂತ ಕೇಳ್ದೆ.

"ನೀ ಮಾಡ್ದ ಹಾದರಕ್ಕೆ ನಂಗೆ ಸಿಕ್ಕಿದ ಪುರ್ಸಾದ"– ಎಂತ ರಾಮಕ್ಕ ಮೊರ್ಪ್‌ಕಂಡ್ ಹೇಳ್ದೆ. ಇದರ ಕೇಳಿ ಚೆನ್ನಕ್ಕಂಗೆ ಕೆಲ್ಸಕೆಟ್ಟತ್‌ಂತ ಗೊತ್ತಾತ್. ಆದರೆ ಅದ್ ಹೆದ್ರ್‌ತಿಲ್ಲೆ. ಹಾದರ ಮಾಡ್ದೋವ್ಕೆ ಹೆದ್ರಿಕೆ ಎಲ್ಲಿದ್ದದೆ? ಭಂಡ ಧೈರ್ಯದಿಂದ ಬಂದದರ ಎದ್ರಿಸಿನೇಂತ ನೆನ್ಸಿಕಂಡದೆ. ಅಂದ್‌ಂದ ಮೇಲೆ ಅದ್ ಮನೆ ಬುಟ್ಟ್ ಹೊರಗೆ ಕಾಲಿಟ್ಟತ್ಲೆ.

ದೊಡ್ಡಯ್ಯ ಗೌಡ್ರ ಬೈಲಿಂದ ಬಂದವೇ ಯಾರೊಟ್ಟಿಗೂ ಮಾತಾಡದೆ ಸೀದಾ ನೀರೆಡಿಗೆ ಹೋಗಿ, ಹಲ್ಲುಜ್ಜಿ, ಮೋರೆ ಕಾಲ್ ತೊಳ್ದ್ ಮನೆಗೆ ಬಂದ್, ಹೊರಗೆ ಹೋಕಾಕನ ಹಾಕುವ ಅಂಗಿನ ಕೋಸಿಕಂಡ್, ಕಪಾಟ್‌ಂದ್ ಹಂಞ ದುಡ್ಡು ತಕಂಡ್ ಬಿರಬಿರನೆ ಹೊರಗೆ ಹೊರ್ಟ್ಹೋದ್ರೊ. ಅವು ಎಲ್ಲಿಗೆ ಹೋದ್ರೋಂತ ಯಾರಿಗೂ ಗೊತ್ತಾತಿತ್ಲೆ. ಒಂದಿನ ಕಳ್ತ್, ಎರ್ಡ್ ದಿನ ಕಳ್ತ್. ದೊಡ್ಡಯ್ಯ ಗೌಡ್ರ ಮನೆಗೆ ಬಾತೇ ಇಲ್ಲೆ. ಮನೆವ್ಕೆಲ್ಲಾ ಯೋಚನೆ ಸುರಾತ್.

ಮೂರ್ನೇ ದಿನ ನಡಿರ್ಳ್ ಗುಡ್ಡೆಂದ ಯಾರೊ ಬೊಬ್ಬೆ ಹೊಡ್ಕಂಡ್ ಮೊರ್ದುವ, ನರ್ಳುವ ಸದ್ದ್ ಕೇಳಿಸ್ತ್. ಹೆಣ್ಮಕ್ಕ ಮೂರು ಜನ ದಿಡ್‌ಕ್ಕನೆ ಎದ್ದ್ ಕುದ್ರೊ. ಯಾರೋ,

"ಅಯ್ಯೋ, ಅಯ್ಯೋ, ಸತ್ತೇಂತ "ಬೊಬ್ಬೆ ಹೊಡ್ಯೋತಿದ್ರೊ. ಎಲ್ಲೋವ್ಕು ಚುಕ್ರಂಗೆ ಏನೋ ಆಗುಟ್ಟೂಂತ ಅರ್ಥ ಆತ್. ಒಬ್ಬರ ಮೋರೆ ಒಬ್ಬ ನೋಡಿಕಂಡ್ರೊ. ಯಾರೂ ಮಾತಾಡ್‌ತ್ಲೆ. ನರ್ಳುವ ಸದ್ದ್ ಹೊತ್ತ್ ಹೋದಾಂಗೆ ಕಮ್ಮಿ ಆತ್. ಕಡೆಗೆ ಸದ್ದ್ ಸುದ್ದ್ ಇಲ್ಲೆ. ಬೊಳ್ಪಾಕನ ಹಟ್ಟಿಗೆ ಸೊಪ್ಪು ತಂದ್ ಹಾಕಿದ ಬೀತ್ರು ಹೇಳ್ತ್.

"ಎಡ್ತೆರೆ, ಚುಕ್ರ ಅಣ್ಣೆರ್ ತೀರ್ ಪೊಯೆರ್. ಬಂಜಿ ಬೇನೆಗೆ, ಇರ್ಳ್ ಇಡೀ ಬೊಬ್ಬೆ ಪಾಡೊಂತೇ ಇತ್ತೆರ್. ಪುಡೇರ್ತ್ ಪುಡೇರ್ತ್ ಸೈತೆರ್" ಎಂತ.

ಅದರ ಕೇಳಿ ರಾಮಕ್ಕ, "ದಾನೆ ಆಂಡ್‌ಗೆ?"– ಎಂತ ಕೇಳ್ತ್.

"ಬಯ್ಯಗ್ ಬೇಲೆ ಬುಡ್ತ್ ಬತ್ತ್‌ತ್, ಕರೊಟಿತ್ತ್‌ನ ಗಂಜಿ ಉಂಡ್‌ತ್ ದೆರ್ತ್‌ರ್‌ಗೆ. ನಡಿರ್ಳ್ ಬಂಜಿ ಬೇನೆ ಸುರಾಂಡ್‌ಗೆ"– ಎಂತ ಬೀತ್ರು ಹೇಳ್ತ್.

ಇದರ ಕೇಳಿ ರಾಮಕ್ಕ ಮತ್ತೆ ಚಿಕವ ಮೋರೆ ಮೋರೆ ನೋಡಿಕೊಂಡ್ರೊ. ಚೆನ್ನಕ್ಕ ಮಾತಾಡದೆ ಕೋಣೆಗೆ ಹೋಗಿ ಗುಡಿ ಹೊದ್ದ್ ಮೊಲ್ಗಿತ್.

ಊರೊವೆಲ್ಲ ಸೇರಿ ದಿಕ್ಕಂಗಳ ಕೈಲಿ ಅವನ ಹೆಣನ ಗುಂಡಿ ತೆಗ್ದ್ ಹಾಕಿ ಮಣ್ಣ್ ಮುಚ್ಚಿದ್ರೋಂತ ಕೆಲ್ಸಕ್ಕೆ ಬಂದ ಆಳ್‌ಗ ಚಿಕವನ ಹಕ್ಕಲೆ ಹೇಳ್ದೊ.

ನಾಲ್ಕನೇ ದಿನ ದೊಡ್ಡಯ್ಯ ಗೌಡರ ಸವಾರಿ ಮನೆಗೆ ಬಾತ್. ರಾಮಕ್ಕ ಗಂಡನೊಟ್ಟಿಗೆ–

"ಚುಕ್ರ ಬೈರ ಸತ್ತ್ ಹೋತ್ ಗಡ"– ಎಂತ ಹೇಳ್ತ್

"ಮಾರಿ ಹೋತ್. ಚೆನ್ನಕ್ಕನ ಹಾದರದ ವಿಷಯ ನೀವು ಏನಾದರ್ ಯಾರೊಟ್ಟಿಗಾದರ್ ಬಾಯಿ ಬುಟ್ಟರೇನೋ, ನೀವುನೂ ಚುಕ್ರ ಹೋದ ದಾರಿಲೇ ಹೋಕಾದು. ಉಸಾರ್"– ಎಂತ ದೊಡ್ಡಯ್ಯ ಗೌಡ್ರು ಗುಟುರು ಹಾಕಿದೊ. ಹೆಣ್ಮಕ್ಕ ಇಬ್ಬೊರು ಕುಂಡೆಗೆ ಬಾಯಿಗೆ ಕೈ ಹಿಡ್ಡ್ ಕುದ್ದೊ.

ಒಂದು ವಾರಲಿ ಮೊದ್ವೆ ದಿನ ಬಾತ್. ಚೆನ್ನಕ್ಕ ಮೊದ್ವೆ ಆಗಿ ಗಂಡನ ಮನೆಗೆ ಹೋತ್. ಊರೋವೆಲ್ಲಾ "ಚುಕ್ರ ಹೈದನ ಗಂಜಿ ಮಡ್ಕೆಗೆ ಯಾರೋ ಇಸ ಬೆರ್ಸಿ ಇದ್ದೊ ಗಡ. ಅಂವ ನರ್ಳಿ ನರ್ಳಿ ಸತ್ತತ್".– ಎಂತ ಮಾತಾಡಿ ಕೊಂಬೆತಿದ್ದೊ. ದಿನಾ ಹೋದಾಂಗೆ ಈ ಸುದಿ ಹಳ್ತಾತ್. ಕಾಲಗರ್ಭಲಿ ಇದೆಲ್ಲಾ ಹೂತೋತ್.

---

# ಮಾವನ ಮಗ್ಳ್ ಕವನ

ಕೊಕ್ಕಲೇ ಮಾಲಿನಿ ಮುತ್ತಪ್ಪ

ನನ್ನ ಮಾವನ ಮಗಳ್ ಲೇಖಿನ
ಲೇಖಿನ ಗೂಡೆ ಬರ್‌ತೊಂದು ಪೊರ್ಲ್‌ನ ಕವನ
ಅವುಳ್ ಬರ್‌ದ ಕವನಲಿ ಹೊಗಳಿ ಹೊಗಳಿ
ಬರ್‌ದಿತ್ತ್ ನನ್ನ ಭಾಷಣನ
ಅದನ್ನ ಓದಿ ನಂಗಾತ್ ಅವಳ ಮೇಲ್ ಪುಲ್‌ಗ್ನಾನ

ಅವಳಿಗೆ ಅವಳ ಕವನಕ್ಕೆ ನನ್ನ ನಮನ
ಕೊನೆಗಳಿಗೆಲಿ ಅವಳಿಂದಾಗಿ ಸಿಕ್ಕಿತ್ ನಂಗೆ ವಿಜಯದ ಬಹುಮಾನ
ಇನ್ನೊಂದು ಕವನ ಬರಿತಾ ಹೇಳ್‌ದೆನಾ
ಲೇಖಿನ ಕೂಡೆ ಬರ್‌ತ್ತೊಂದು ಕವನ
ಅದರಲ್ಲಿನು ಇತ್ತ್ ನನ್ನ ಅನ್ವೇಷಣೆ
ಎಂದೆದ್ ಮರಿಯಕೆ ಬುಡೆ ನಾ
ಮಾವನ ಮಗಳ್ ಲೇಖಿನ
ನಿಂಗೆ ನನ್ನ ನಮನ

# ರಮ್ಯಂಗೆ ಮದ್ವೆ

**ಶ್ರೀಮತಿ ಅಮೆ ಚಂದ್ರಮ್ಮ**

ಮನೆ ಅಂಗ್ಳಲಿ ಕಟ್ಟಿದ ನಾಯಿ ಜೋರಾಗಿ ಬೊಗಳ್‌ತಿತ್ತ್. ಗದ್ದೆಲಿ ನಾಟಿ ನೆಡ್ತಿದ್ದ ರಘು ಹೈದ ಅವ್ವನ ಜೋರಾಗಿ ಕರ್ದ್ ಹೇಳ್ತ್ "ಅವ್ವ ನಾಯಿ ಜೋರು ಬೊಗ್ಳಿದೆ, ಯಾರೋ ಬಂದೊಳೊ ಕಂಡದೆ, ಹೋಗಿ ನೋಡ್ಕಂಡ್ ಬನ್ನೆ" ಅಂತ ಹೇಳಿ ಮನೆ ಕಡೆ ಹೋತ್.

ಮನೆ ಮುಂದೆ 2 ಗಂಡ್ ಜನ ನಿಂತ್ಕೊಂಡಿದ್ದೊ. ಒಬ್ಬಂಗೆ ಸುಮಾರ್ 50 ವರ್ಷ ವಯಸ್ಸಾಗಿರ್ದು. ಇನ್ನೊಬ್ಬ ಚಿಗ್‌ರ್ ಮೀಸೆ ಹೈದ. ಕಪ್ಪು ಬಣ್ಣದ ಜೀನ್ಸ್ ಪ್ಯಾಂಟ್, ಬಿಳಿ ಶರ್ಟ್ ಹಾಕ್ಕೊಂಡ್ ಸ್ಟೈಲ್ ಆಗಿ ಕಾಣ್ತಿತ್. "ಹೋ ನೀವು ನಮ್ಮ ಮನೆಗೆ ಬಂದದ್ ಕಂಡದೆ. ಬನ್ನಿ ಕುದ್ಕಣಿ, ಅಂತ ಹೇಳಿ ಅವರ್ನ ಐಮರಲಿ ಕೂರ್ಸಿದೆ. "ಅವ್ವ ಗದ್ದೆಲಿ ಉಟ್ಟು, ಕರ್ದನೆ" ಅಂತ ಹೇಳಿ ರಘು ಹೈದ ಅವ್ವನ ಕೂಗಿ ಕರ್ದದೆ. ಅವ್ವ ಚುರ್ಕಾಗಿ ಬಾತ್.

ಅವ್ವ ಒಳ್ಗೆ ಬರ್ತಿದ್ದಂಗೆ ನೆಂಟ್ರ್‌ನ ನೋಡಿ, ಅಣ್ಣಾ ಬಂದೇರಿಯಾ? ಸೌಖ್ಯನಾ? ಕುದ್ಕಣಿ ಈಗ ಬನ್ನೆ ಅಂತ ಹೇಳಿ ಮನೆ ಒಳ್ಗೆ ಹೋಗಿ, ಸೌದೆ ಒಲೆ ಊದಿ, ಕಾಫಿ ಕಾಯ್ಸಿ ತಂದ್, ನೆಂಟ್ರ ಮುಂದೆ ಮಡ್ಗಿದೆ. ರಘು ಹೈದ ನೆಂಟ್ರ್ ಒಟ್ಗೆ ಮಾತಾಡ್ತ ಇತ್ತ್.

ಅವ್ವ ಮಾತ್ ಸುರು ಮಾಡ್ತ್, "ನೆಂಟ್ರ್ ಯಾರ್‌ಂತ ಗೊತ್ತಾತ್ಲೆ?"

'ನನ್ನ ಹೆಸ್ರ್ "ಸುಬ್ಬಯ್ಯ" ಅಂತ ಅಕ್ಕ, ಇಂವ ನನ್ನ ಅಣ್ಣನ ಮಂಜ "ವಿನೋದ್", ಬಿ.ಎ ಓದುಟ್ಟು, ಮಿಲ್ಟ್ರಿಲಿ ಚಾಕ್ರಿ ಮಾಡ್ಕಂಡ್ ಉಟ್ಟು, ನಿಮ್ಮಲ್ಲಿ

ಮದ್ವೆ ವಯ್ಸ್ನ ಗೂಡೆ ಉಟ್ಟೂಂತ ಗೊತ್ತಾತ್. ಹಂಗೆ ನೋಡ್ಕಂಡ್ ಪೋಯಿಂತ ಬಂದೊ. ಗೂಡೆ ಮನೇಲಿ ಇಲ್ಲೇನ?

"ಇಲ್ಲೆ, ಅವ್ವ ಬೆಂಗ್ಳೂರ್ಲಿ ನರ್ಸ್ ಕೆಲ್ಸ ಮಾಡ್ಕಂಡ್ ಉಟ್ಟು, ಅವ್ವನು ಬಿ.ಎ ಓದುಟ್ಟು, ಒಳ್ಳೆ ಸಮ್ಮಂದ ಸಿಕ್ಕಿರೆ ಈ ವರ್ಷ ಮದ್ವೆ ಮಾಡೊಕೂಂತ ಒಳೊ. ಅವ್ವ ಹೆಸ್ರ್ ರಮ್ಯ"

"ಹೌದಾ, ಹಂಗಾರೆ ಗೂಡೆನ ಫೋಟೋ ಇದ್ದರೆ ತೋರ್ಸಿ" ಗೂಡೆನ ಫೋಟೋ ನೋಡಿ, ಗೂಡೆದ್ ಅಡ್ರೆಸ್, ಫೋನ್ ನಂಬರ್ ಎಲ್ಲಾ ತಗೊಂಡೊ.

"ಆಗ್ಲಿ ಹೈದಂಗು, ಗೂಡೆಗೂ ಇಷ್ಟ ಆದ್ರೆ ಮುಂದೆ ಮಾತಾಡೊನೊ. ನಾವು ಇನ್ನ್ ಬಂದವೆ" ಅಂತ ಹೇಳಿ ನೆಂಟ್ರ್ ಹೊರ್ಟೊ.

ವಿನೋದ್ ಬೆಂಗ್ಳೂರು ರಾಮಯ್ಯ ಆಸ್ಪತ್ರೆಗೆ ಫೋನ್ ಮಾಡಿ, ರಮ್ಯನ ಕರ್ಯೆಕೆ ಹೇಳ್ದೆ. ರಮ್ಯ ಫೋನ್ ತಕಂಡ್ ಯಾರ್‌ಂತ ಕೇಳ್ದೆ.

"ನನ್ನ ಹೆಸ್ರ್ ವಿನೋದ್ ಅಂತ, ನಾನ್ ಮತ್ತೆ ನನ್ನ ಚಿಕ್ಕಪ್ಪ ಇಬ್ಬರು ನಿಮ್ಮ ಮನೆಗೆ ಹೋಗಿದ್ದೊ. ನಿಮ್ಮ ಅಮ್ಮನ ಒಟ್ಟಿಗೆ ಮಾತಾಡಿ ನಿಮ್ಮ ಫೋಟೋ ನೋಡ್ದೆ. ನಂಗೆ ನಿಮ್ಮನ್ನ ಇಷ್ಟ ಆತ್. ನಿಮ್ಗೆ ಇಷ್ಟ ಆದ್ರೆ ಮದ್ವೆ ಆಕ್, ನಿಮ್ಮನ್ನ ನೋಡಿ ಮಾತಾಡೊಕುಂತ ಒಳೆ, ಎಲ್ಲಿ ಸಿಕ್ಕಿರೆ?

"ಆಗ್ಲಿ ನಾನ್ ನನ್ನ ಡ್ಯೂಟಿ ಮುಗ್ಸಿ, ಸಾಂಯ್ಕಾಲ 5ಗಂಟೆ ಹೊತ್ಗೆ ಲಾಲ್‌ಭಾಗ್ ಹತ್ರ ಬನ್ನೆ, ಅಲ್ಲಿ ಭೇಟಿ ಮಾಡೊನೊ, ನಾನ್ ನೀಲಿ ಬಣ್ಣದ ಸೀರೆ ಉಟ್ಕಂಡ್ ಲಾಲಾಬಾಗ್ ಗೇಟ್ ಹತ್ರ ನಿಂತಿದ್ದನೆ. ನೀವು ನನ್ನ ಫೋಟೋ ನೋಡೊಳೆರಿ, ಗುರ್ತ್ ಹಿಡ್ಯೆಕ್.

ವಿನೋದ್ ಹೈದ ಮೊದ್ಲೆ ಹೋಗಿ ಕಾಯ್ತಾ ಇದ್ದದೆ. ರಮ್ಯನ ಸುಲ್ಬಲಿ ಗುರ್ತ್ ಹಿಡ್ದದೆ. "ಹಲೋ ರಮ್ಯ, ನಾನ್ ವಿನೋದ್" ಹಲೋ, ಬನ್ನಿ ಹೋಟೇಲ್‌ಲಿ ಕಾಫಿ ಕುಡ್ಕಂಡ್ ಮಾತಾಡನೋ" ವಿನೋದ್ ಕರ್ದದೆ.

ಇಬ್ಬರೂ ಹೋಟೆಲ್ ಒಳ್ಗೆ ಹೋದವೆ, ಒಂದ್ಕಡೆ ಕುದ್ಕಂಡ್ ಜ್ಯೂಸ್ ಆರ್ಡರ್ ಮಾಡ್ವೆ. ಜ್ಯೂಸ್ ಕುಡ್ಕಂಡ್ ಒಬ್ಬರ ಮುಖ ಒಬ್ಬ ನೋಡ್ಕಂಡ್ ಸ್ವಲ್ಪ ಹೊತ್ತ್ ಸುಮ್ಮನೆ ಕುದ್ದವೆ. ವಿನೋದ್‌ಗೆ ಗೂಡೆನ ಒಟ್ಟಿಗೆ ಮಾತಾಡಿಕೆ ಆಸೆ. ಆದ್ರೆ ಹೆಂಗೆ ಮಾತಾಡ್ದು, ಹೆಂಗೆ ಸುರು ಮಾಡ್ದೂಂತ ಗೊತ್ತಾದುಲೆ. ಹಂಗೆನೆ ಸ್ವಲ್ಪ ಹೊತ್ತ್ ಕಳ್ದದೆ. ರಮ್ಯ ಸುರು ಮಾಡ್ತ್ "ನಂಗೆ ಹಾಸ್ಪೆಲ್ಗೆ ಲೇಟ್ ಆದೆ, ನಾನ್ ಹೊರ್ಟನೆ" "ಒಂದ್ ಗಳ್ಗೆ ಇರಿ, ನಾನ್ ನಿಮ್ಮನ ಮದ್ವೆ ಆಕೆ ಇಷ್ಟ ಪಟ್ಟೊಳೇಂತ ಫೋನ್ಲಿ ಹೇಳಿದ್ದೆ. ನೀವು ಏನೂ ಹೇಳ್ತ್‌ಲೆ.

ರಮ್ಯ ತಲೆ ತಗ್ಸಿ, ಓರೆ ಕಣ್ಣ್‌ಲಿ ಹೈದನ ನೋಡಿ, ಸಣ್ಣದಾಗಿ ನೆಗಾಡ್ದೆ "ನೀವು ಎಂತ ಕೆಲ್ಸ ಮಾಡ್ರೆ?"

"ನಾನ್ ಮಿಲ್ಟ್ರಿಗೆ ಸೇರಿ 5 ವರ್ಷ ಆತ್, ಈಗ ಡೆಲ್ಲಿಲಿ ಒಳೆ. ನೀವು ನಿಮ್ಮ ಒಪ್ಪಿಗೆ ಹೇಳ್ತ್‌ಲೆ."

"ನನ್ನ ಒಪ್ಪಿಗೆನ ನನ್ನಣ್ಣ ರಘುನ ಒಟ್ಟಿಗೆ ಮಾತಾಡಿ ತಿಳ್ಸಿನೆ. ನಿಮ್ಮ ಫೋನ್ ನಂಬರ್ ಕೊಡಿ"

ಸ್ವಲ್ಪ ದಿನ ಕಳ್ತ್. ಒಂದಿನ ರಘು ಹೈದಂಗೆ ಸುಬ್ಬಯ್ಯ ಫೋನ್ ಮಾಡ್ದೆ, "ಹಲೋ ರಘು ನಾನ್ ಸುಬ್ಬಯ್ಯ, ನಿಮ್ಮ ಸುದ್ದಿನೇ ಇಲ್ಲೆ, ಅದಕೆ ನಾನೇ ಫೋನ್ ಮಾಡ್ದೆ. ನಿಮ್ಮ ತಂಗಿಗೆ ನಮ್ಮ ಹೈದನ ಒಪ್ಪಿಗೆ ಆಗುಟ್ವಾ?"

"ಹೌದು, ರಮ್ಯ ಒಪ್ಪಿಕೊಂಡುಟ್ಟು, ಮನೆಲಿ ಎಲ್ಲವೂ ಒಪ್ಪಿಕೊಂಡೊಳೊ"

"ಹೌದಾ? ತುಂಬಾ ಖುಷಿ ಆತ್, ನಮ್ಮಲ್ಲಿನು ಎಲ್ಲವೂ ಗೂಡೆನ ಇಷ್ಟ ಪಟ್ಟೊಳೊ. ಅಂದರೆ ಒಂದು ವಿಷ್ಯ ಮಾತಾಡೊಕು, ವಿನೋದ್‌ಗೆ ರಜಾ ಕಮ್ಮಿ ಉಟ್ಟು, ಮದ್ವೆ ಕಾರ್ಬಾರ್ ಬೇಗ, ಬೇಗ ಆಕು, ಮದ್ವೆ ಖರ್ಚ್ ಎಲ್ಲಾ ನೀವೇ ಮಾಡೊಕು, ಗೂಡೆಗೆ ಬಟ್ಟೆ ಬರೆ, ಚಿನ್ನ ಚಿಗ್‌ರ್ ಎಲ್ಲಾ ಲಾಯಕ್ಕಾಗಿ ಕೊಡೊಕು, ಹೈದಂಗೆ ಸೂಟ್ ಹೊಲ್ಸಿ ಕೊಡೊಕು, ಸ್ವಲ್ಪ ದುಡ್ಡುನು ಕೊಡುಕಾದೆ, ಎಷ್ಟ್‌ಂತ ಮತ್ತೆ ಮಾತಾಡೊನೊ ಅಂತ ಹೈದನ ಅಪ್ಪ ಅಮ್ಮ ಹೇಳುವೆ.

"ಹೋ ಹೌದಾ? ನೋಡಿ ನನ್ನ ತಂಗೆ ವಿದ್ಯಾವಂತೆ, ಒಳ್ಳೆ ಕಡೆ ಚಾಕ್ರಿಲಿ ಉಟ್ಟು, ಕೈ ತುಂಬಾ ಸಂಬ್ಳ ಬಂದದೆ, ನೀವು ಹೇಳ್ದಂಗೆ ಮದ್ವೆ ಮಾಡಿ ಕೊಡಿಕೆ ನಮ್ಮ ಕಡೆ ಒಪ್ಗೆ ಇಲ್ಲೆ, ನೀವು ಬೇರೆ ಕಡೆ ನೋಡ್ಕಣಿ, ನಮಸ್ತೆ" ಅಂತ ಹೇಳಿ ರಘು ಮಾತ್ ಮುಗ್ಸಿದೆ.

ವಿಷ್ಯ ತಿಳ್ದ್ ರಮ್ಯಂಗೆ ತುಂಬಾ ಬೇಜಾರ್ ಆದೆ. ನಾನು ಎಷ್ಟ್ ಕಷ್ಟ ಪಟ್ಟ್ ದಿನ 4–5 ಮೈಲ್ ನಡ್ದ್ ಶಾಲೆಗೆ ಹೋಗ್ತಿದ್ದೆ. ಡಿಗ್ರಿ ಸಂಪಾದ್ನೆ ಮಾಡೊಳೆ, ಮನೇಲಿ ಕೆಲ್ಸ್ ಮಾಡ್ಕಂಡ್, ನಮ್ಮ ಗದ್ದೆ, ತೋಟಲಿನೂ ಕೆಲ್ಸ್ ಮಾಡ್ಕಂಡ್ ಕಷ್ಟ ಪಟ್ಟ್ ಓದೊಳೆ. ನನ್ನ ಅಪ್ಪ, ಅಮ್ಮ, ಅಣ್ಣ ರಘು ಎಲ್ಲವೂ ನನ್ನ ರಾಣಿ ಹಂಗೆ ಪ್ರೀತಿ ಮಾಡಿ ಬೆಳ್ಸೊಳೊ. ಅಪ್ಪ ಅಮ್ಮ ಶ್ರೀಮಂತ್ರು ಅಲ್ಲ. ಅಷ್ಟ್ ದೊಡ್ಡ ಖರ್ಚ್ ಮಾಡಿ ಮದ್ವೆ ಮಾಡಿಕೆ ಹೆಂಗೆ ಆದೆ? ನಂಗೆ ಇಂಥ ಹೈದ ಬೇಡ, ಹೆಣ್ ಮಕ್ಳ ಕಷ್ಟ ಸುಖ ಗೊತ್ತಿಲ್ಲದ್ ಮನೇಲಿ ನಾನ್ ಹೆಂಗೆ ಸುಖಲಿ ಇರಿಕೆ ಅದು? ನನ್ನ ಅಪ್ಪ, ಅಮ್ಮ, ಅಣ್ಣ ನೋಡ್ದ, ಕಷ್ಟ ಸುಖ ಗೊತ್ತಿರ್ವ ಹೈದನ ಮದ್ವೆ ಮಾಡ್ಕಣೆ ಅಂತ ಗ್ಯಾನ ಮಾಡಿ, ಅಣ್ಣ ರಘುಗೆ ಫೋನ್ ಮಾಡಿ ಹೇಳ್ತ್.

ಸ್ವಲ್ಪ ದಿನ ಕಳ್ತ್, ರಮ್ಯಂಗೆ ವಿನೋದ್ ಫೋನ್ ಮಾಡ್ದೆ. "ಹಲೋ ನಾನ್ ವಿನೋದ್ ಮಾತಾಡ್ತು" ತಕ್ಷಣ ರಮ್ಯ ಏನೂ ಮಾತಾಡ್ದೆ ಫೋನ್ ಕಟ್ ಮಾಡ್ದೆ. ವಿನೋದ್ ಮತ್ತೆ ಮೂರ್‌ನಾಲ್ಕ್ ಸಲ ಫೋನ್ ಮಾಡ್ದೆ. ರಮ್ಯ ಫೋನ್ ಕಟ್ ಮಾಡ್ತಾನೆ ಇತ್ತ್.

ಇದ್ನ ನೋಡ್ದ ರಮ್ಯನ ಫ್ರೆಂಡ್ ವಿಮಲ ಹೇಳ್ದೆ "ನೋಡು ರಮ್ಯ, ಹೈದ ನಿನ್ನ ತುಂಬಾ ಇಷ್ಟ ಪಟ್ಟುಟ್ಟು ಕಂಡದೆ. ಒಮ್ಮೆ ಫೋನ್ ತೆಗ್ದ್ ನೋಡು, ಮತ್ತೆ ಮುಂದೆ ನೋಡನೊ"

ಮತ್ತೆ ಫೋನ್ ಬಂದದೆ, ರಮ್ಯ ಫೋನ್ ತೆಗ್ದ್ "ಹಲೋ" ಅಂತ ಹೇಳ್ದೆ.

"ರಮ್ಯ ನಿಂಗೆ ನಿನ್ನ ಮೇಲೆ ತುಂಬಾ ಸಿಟ್ಟ್ ಬಂದುಟ್ಟು, ಒಮ್ಮೆ ನಂಗೆ ಮಾತಾಡಿಕೆ ಸಿಕ್ಕ್ ಪ್ಲೀಸ್, ನಿಂಗೆ ಎಲ್ಲ ವಿಷ್ಯ ಹೇಳ್ನೆ.

"ನೋಡಿ ನಾನು ಡ್ಯೂಟಿಲಿ ಒಳೆ, ನಾನ್ ಹೊರ್ಗೆ ಎಲ್ಲಿನು ಬಾದುಲೆ, ಮಾತಾಡೊಕೂಂತ ಇದ್ರೆ ಆಸ್ಪತ್ರೆ ಹತ್ರನೇ ಬನ್ನಿ"

"ಓಕೆ, ಇನ್ನ್ 5 ನಿಮ್ಷಲಿ ಬನ್ನೆ. ಹೇಳ್ದಂಗೆ ವಿನೋದ್ ಬಂದ್ ತಲ್ಪಿದೆ.

"ಹಲೋ ರಮ್ಯ, ಹೆಂಗೆ ಒಳ?" ರಮ್ಯ ಸಿಟ್ಟ್‌ಲಿ ಮುಖ ಕೆಂಪು ಮಾಡ್ಕಂಡ್, ಹೈದನ ಮುಖನೂ ನೋಡ್ದೆ "ನಿಮ್ಮ ಅಪ್ಪ ಅಮ್ಮ ಎಂತ ಗ್ಯಾನ ಮಾಡ್ಯೊಳೊ? ನಾನೇನ್ ಕುಂಟಿನ ಕುರ್ಡಿನ? ನನ್ನ ಅಪ್ಪ ಅಮ್ಮ ನನ್ನ ಲಾಯಕ್ಕಾಗಿ ಓದ್ಸಿ, ಒಳ್ಳೆ ಚಾಕ್ರಿಗೆ ಸೇರ್ಸೊಳೊ. ನಂಗೆ ಕೈ ಕಾಲ್ ಗಟ್ಟಿ ಉಟ್ಟು, ಕೈ ತುಂಬಾ ಸಂಬ್ಳ ತಕಣ್ತ ಒಳೆ. ಮತ್ತೆ ಯಾಕೆ ನಿಮ್ಮಂತ ಧನ ಪಿಶಾಚಿ ಹೈದನ ಮದ್ವೆ ಆಕು?

"ರಮ್ಯ ಪ್ಲೀಸ್ ಹಂಗೆಲ್ಲ ಮಾತಾಡ್ಬೇಡ, ನಿಂಗೆ ದಮ್ಮಯ್ಯ, ಇದರ್ಲಿ ನನ್ನ ತಪ್ಪೇನೂ ಇಲ್ಲೆ, ಎಲ್ಲಾನು ನಂಗೆ ಗೊತ್ತಿಲ್ದಂಗೆ ನಡ್ದೋತು, ಈಗ ನಾನ್ ಅಪ್ಪ ಅಮ್ಮ ಎಲ್ಲವ್ರ ಒಟ್ಟಿಗೂ ಮಾತಾಡೊಳೊ, ತಿಳುವಳಿಕೆ ಹೇಳೊಳೆ, ನಾನು ನೀನ್ ತಾನೆ ಮದ್ವೆ ಆಗವು, ನಮ್ಮ ಮದ್ಯೆ ಇಂತ ವ್ಯತ್ಯಾಸಗ ಇಲ್ಲದಿದ್ರೆ ಆತ್, ನಮ್ಮ ಕಡೆಂದ ಯಾವ್ದೆ ಬೇಡಿಕೆ ಇಲ್ಲೆ, ನಿನ್ನ ಪ್ರೀತಿ, ಇಷ್ಟ ಅಷ್ಟೆ ಸಾಕ್" ನಂಗೆ ಇನ್ನ್ ಒಂದ್ ತಿಂಗ ರಜೆ ಇರ್ದು, ಅದರೊಳ್ಗೆ ಮದುವೆ ಕಾರ್ಯ ಮುಗ್ಸೋಕು"

"ನೋಡಿ, ಗಂಡ್ ಮಕ್ಕಳ್ನ ಸಾಕಿದ ಹಂಗೇ ಎಲ್ಲಾ ಅಪ್ಪ ಅಮ್ಮಂದ್ರ್ ಹೆಣ್ಣ್ ಮಕ್ಕಳ್ನು ಕಷ್ಟಪಟ್ಟ್ ಸಾಕುವೆ, ಬೆಳ್ಸುವೆ, ವಿದ್ಯಾಭ್ಯಾಸ ಕೊಟ್ಟವೆ, ಮದ್ವೆನೂ ಮಾಡುವೆ. ಅಂತ ಹೆತ್ತವ್ಕೆ ಮದ್ವೆ ಮಾಡಿ ಕೊಡ್ಕನ ಕಷ್ಟ ಕೊಡಿಕೆ ಆಗದ್, ನೋವು ಕೊಡಿಕೆ ಆಗದ್ ಹಂಗೆನೆ ಮನೆಗೆ ಬಂದ ಸೊಸೇನ ಅತ್ತೆ-ಮಾವ ಅವರ ಸ್ವಂತ ಮಗ್ಳಂಗೆ ನೋಡಿಕಣೊಕು.

ರಮ್ಯನ ಮಾತ್‌ಂದ ಸಮಾಧಾನ ಆದ ವಿನೋದ್ ಖುಷಿಂದ "ಆಗ್ಲಿ ಮಾರಾಯ್ತಿ, ನೀನ್ ಹೇಳ್ದಂಗೆ ಆಗ್ಲಿ, ಮದ್ವೆ ಏರ್ಪಾಡ್ ಮಾಡನೋ"

ರಮ್ಯ ಖುಷಿಂದ ತಲೆ ಕೆಳ್ಗೆ ಹಾಕಿ ಆಗ್ಲೀಂತ ತಲೆ ಆಡ್ಸಿದೆ.

---

## ಸ್ನೇಹ

ಎಲ್ಲವೂ ಪ್ರೀತಿ, ಪ್ರೇಮನ
ದೂರ, ದೂರ, ದೂಡ್‌ತ್ತಾ ಒಖೋ
ಸ್ನೇಹ ಗ್ರೇಟ್‌ತ ಪದವಿ ಕೊಡ್‌ತೊಳೋ
ಪ್ರೀತಿ, ಪ್ರೇಮ ಇದ್ದರೆ
ಸ್ನೇಹ ಇದ್ದದೇತೆಳ ಯಾರಿಗೆನೂ ಗೊತ್ಲೆ
ಸ್ನೇಹಂತ ಹೇಳ್‌ವ ಪ್ರಾಣಕ್ಕೆ ಪ್ರೀತಿನೇ
ಉಸ್‌ರ್, ಪ್ರಾಣ

**ಕೊಕ್ಕಲೇ ಮಾಲಿನಿ ಮುತ್ತಪ್ಪ**

ನಿಜವನ್ನಾಧರಿಸಿದ ಕತೆ



# ಗೃಹಿಣಿಯ ಸಂಸಾರ

ಪೂಜಾರೀರ ಪಿ. ಮಾದಪ್ಪ

ನಮ್ಮ ಊರ್‌ಲಿ ರಾಮಣ್ಣ ಗೌಡರ್‌ದ್ ಒಂದು ನಿಷ್ಠಾವಂತ ತುಂಬಿ ತುಳುಕುವಂತ ದೊಡ್ಡದಾದ ಸಂಸಾರ. ಅವರ ಧರ್ಮಪತ್ನಿ ಸರೋಜಮ್ಮ. ಇವರ ದಿನನಿತ್ಯ ಜೀವನ ಇವು ಅವರ ಮನೆಗೆ ಬಂದವರೊಟ್ಟಿಗೆ ಒಂದು ಸಂತೋಷದ ಮಾತ್‌ಕತೆ ಮತ್ತೆ ಅವರ ಮನೆಲಿರುವ ಅಂಬಲಿ, ಗಂಜಿ, ಕುಡಿಯಕೆ ನೀರ್ ಅಥವಾ ತಂಪಾದ ಪಾನಕಗಳ್ನ ಕೊಟ್ಟ್ ಸತ್ಕಾರ ಮಾಡ್ದು. ಆ ಗಂಡ್‌ಹೆಣ್‌ಗಳ ಸಂತೋಷದ ದಾಂಪತ್ಯ ಜೀವನ ನೋಡ್‌ಕಾಕನ ಇವು ಒಂದು ಮಾದರಿ ಕುಟುಂಬಸ್ಥರ್ ಇವರ ಬಗ್ಗೆ ಜನರಿಗೆಲ್ಲಾ ತಿಳುವಳಿಕೆಯಾಗಲಿತ್ತೇಳಿ ಒಂದು ಕಥೆ ಬರೆಯುಕುತ್ತೇಳಿ ನನ್ನ ಮನಸ್ಸಿಗಾತ್.

ಒಂದು ದಿನ ರಾಮಣ್ಣ ಗೌಡರ ಮನೆಗೆ ನಾನ್ ಹೋದೆ. ಅವು ಗಂಡ ಹೆಣ್ಣ್ ಇಬ್ಬರ್ ಮನೆಲಿದ್ದೊ. ಮನೆಗೆ ನಾನ್ ಹೋದಂಗೆ ಅವರ ಧರ್ಮಪತ್ನಿ ಒಂದು ಚೊಂಬು ನೀರ್ ತಂದ್ ಮನೆಯ ಐಮರಲಿ ಮಡಗಿದ್ದೊ. ನಾನ್ ಕೈಕಾಲ್ ತೊಳ್ದ್ ಬಂದೆ ಅವು ಕಿರಿಯವು ಅದ್‌ರ್‌ಂದ ಅವಿಬ್ಬರ್ ಬಂದ್ ಕಾಲ್‌ಹಿಡ್ದ್ ಆಶೀರ್ವಾದ ಪಡ್‌ಕೊಂಡೊ. ಎಲೆತಟ್ಟೆಲಿ ಎಲೆಯಡಿಕೆ ಮಡ್‌ಗಿದೊ ಕುಡಿಯಕೆ ಕಾಫಿ ತಂದ್ ಕೊಟ್ಟ್ ಕಷ್ಟ ಸುಖ ಮಾತಾಡಿಕೆ ಸುರ್ ಮಾಡ್ದೊ. ಮಾತ್ತಾಡ್ ಮಾತ್ತಾಡ್ ನಾನ್ ಅವರ ಸುಖ ಜೀವನದ ಸಂತೋಷದ ಬಗ್ಗೆ ಮಾತಾಡಿಕೆ ಸುರ್ ಮಾಡ್ದೆ. ಆಗ ದಂಪತಿಗೆ ಏನ್ ಹೇಳ್ದೊ ಗೊತ್ತಾ, ಎಲ್ಲದಕ್ಕೂ

ದೇವರ ದಯ, ಕರುಣೆ, ಆಶೀರ್ವಾದ ನಮ್ಮ ಮ್ಯಾಲಿದ್ದರೆ ಎಲ್ಲವೂ ತನ್ನಿಂದ ತಾನೆ ಬಂದದೆ. ಇದನ್ನ ಹಣ ಕೊಟ್ಟ್ ಪಡ್‌ಕಂಬಕಾದುಲೆ ಆದರೆ ನಾವು ನಡ್ಕಂಬಂತಾ ರೀತಿ ನೀತಿ ದುಡಿಮೆ ಮತ್ತೆ ಖರ್ಚಿಗಳಿಗೆ ಒಂದು ಇತಿ ಮಿತಿ ಇರಕು, ಅದನ್ನ ಆಧಾರ ಕಂಬವಾಗಿಟ್ ಕಂಡ್ ನಾವು ಜೀವನ ಸಾಗಿಸಿರೆ ಸುಖ ಜೀವನತ್ತೇಳ್ದು ತಾನಾಗಿಯೇ ಬಂದದೆ. ಆದರೆ ಪ್ರತಿಯೊಂದು ವಿಚಾರಲಿ ಒಂದು ತಾಳ್ಮೆತ್ತೇಳ್ದು ಇದ್ದರೆ ಮಾತ್ರ ಅದ್ ಒಂದು ಬದುಕು.

ನಾನ್ ಆ ಕುಟುಂಬದ ದಂಪತಿಗಳ ಬಗ್ಗೆ ಒಂದು ಕಥೆ ಬರೆಯುತ್ತೋಳೆತ್ತೇಳಿ ಊರ್‌ನ ಹತ್ತಾರ್ ಜನಕೆ ಗೊತ್ತಾತ್, ಅದಕ್ಕಾಗಿ ಅವೆಲ್ಲಾ ಒಟ್ಟು ಸೇರಿಕಂಡ್ ಗುಸು ಗುಸು ಮಾತಾಡಿಕೆ ಸುರ್ ಮಾಡ್ಡೊ. ನಾವು ಈ ಊರ್‌ಲಿ ಇಷ್ಟೊಂದು ಜನ ಐಶ್ವರ್ಯವಂತರ್, ದೊಡ್ಡ ದೊಡ್ಡ ಮನೆತನವು ಇರ್‌ಕಾಕನ ಆ ಗರೀಬ ಕುಟುಂಬಸ್ಥರ್‌ನ ಹೊಗಳಿ ಕಥೆ ಬರೆಯಕೆ ಕಾರಣ ಎನ್‌ತ್ತೇಳಿ ನಾವೆಲ್ಲಾ ಸೇರಿಕಂಡ್ ಈ ಕಥೆಗಾರನ ಅಥವಾ ರಾಮಣ್ಣ ಗೌಡರ ಮನೆಗೆ ಪೋಯಿತ್ತೇಳಿಕಂಡ್ ಗಂಡ್ ಮತ್ತೆ ಹೆಣ್ಣ್ ಜನ ಸೇರಿಕಂಡ್ ಬಂದೆ ಬಿಟ್ಟೊ ಆಗ ನಾನ್ ಸಹ ಅಲ್ಲೇ ಇದ್ದೆ. ನನ್ನನ್ನ ಕಂಡ ಅವುಕ್ಕೆಲ್ಲಾ ಸಿಟ್ ನೆತ್ತಿಗೇರಿತ್ ಬಾಯಿಗೆ ಬಂದಂಗೆಲ್ಲಾ ಮಾತಾಡಿಕೆ ಸುರು ಮಾಡ್ಡೊ. ನಾನ್ ಸಹ ಅಲ್ಲೇ ಇದ್ದೆ. ನನ್ನನ್ನ ಕಂಡ ಅವುಕ್ಕೆಲ್ಲಾ ಸಿಟ್ ನೆತ್ತಿಗೇರಿತ್ ಬಾಯಿಗೆ ಬಂದಂಗೆಲ್ಲಾ ಮಾತಾಡಿಕೆ ಸುರು ಮಾಡ್ಡೊ. ನಾನ್ ದೇವರ್ನ ಗ್ಯಾನ್ ಮಾಡಿ ಅವೆಲ್ಲಾ ಬಂದ ವಿಚಾರನ ಕೇಳ್ದೆ. ಅವರ ಕೇಳಿಕೆ ವಿಚಾರ ನಂಗೆ ಅರ್ಥ ಆತ್, ಬಂದವರ್‌ನೆಲ್ಲಾ ಕೂರಿಸಿ ಕಂಡ್ ನಗಾಡಿಕಂಡ್ ಅವುಕೆಲ್ಲಾ ಉತ್ತರ ಕೊಡಕುತ್ತಾ ಗ್ಯಾನ ಮಾಡ್‌ತ್ತಿರ್‌ಕಾಕನ ಸರೋಜಮ್ಮ ಅವುಕ್ಕೆಲ್ಲಾ ತಂಪು ಪಾನೀಯ ಕುಡಿಯಕೆ ಮಾಡಿ ತಕಂಡ್ ಬಂದ್ ಬನ್ನಿ ಬನ್ನಿ ಸುರ್‌ಗೆ ಕುಡ್‌ಕನಿ ಆ ಮ್ಯಾಲೆ ಕಷ್ಟ ಸುಖ ಮಾತಾಡೊನೊ ಇಂತದೆಲ್ಲಾ ಈ ಪ್ರಪಂಚಲಿ ಇದ್ದೆ ಇದ್ದವೆ. ಇದೆಲ್ಲಾ ಸಾಮಾನ್ಯತ್ತೇಳಿ ಒಳಗೆ ಹೋಗಿ ಮತ್ತೆ ಸ್ವಲ್ಪ ಹೊತ್ತ್ ಬಿಟ್ಟ್ ನಗಾಡ್ತಾ ಕುಸಿ ಕುಸಿಯಾಗಿ ಹೊರಗೆ ಬಂದೊ. ಅವರ ನಗುಮುಖ ನೋಡ್ ಕಾಕನ ಬಂದವರ ಮನ್ಸಲಿ ಒಂದು ತರದ ಸಂಕೋಚ ಸುರಾತ್ ಅವರೊಳಗೆ ಅವೆ ಪಿಸಿ ಪಿಸಿ ಮಾತಾಡಿಕೆ ಸುರ್ ಮಾಡ್ಡೊ. ಆದರೂ ಸಹ ಒಬ್ಬ ಗಟ್ಟಿ ಮನ್ಸ್ ಮಾಡಿ ಬಂದ ವಿಚಾರನ ಹೇಳ್ತ್, ಸುರ್‌ಲಿ ಬಾಯಿಗೆ ಬಂದಂಗೆ ಬೈಕಂಡ್ ತನ್ನಿಂದ ಮತ್ತೆ ತಾವೆ ಸಮ್ಮನಾದೊ.

ಆಗ ನಂಗೂ ಸಹ ಒಂದು ವಿಚಾರ ಹೊಳ್ತ್. ನಾನ್ ಹೇಳ್ದೆ ನೀವೆಲ್ಲಾ ಬಂದದ್ ತುಂಬಾ ಕುಸಿಯಾತ್ ಮನುಷ್ಯರ್ ತಪ್ಪು ಮಾಡ್ದು ಅಥವಾ ತಪ್ಪು ಬಾವನೆಗಳ್ನ ಕಲ್ಪಿಸಿ ಕೊಂಬುದು ಸಾಮಾನ್ಯ. ಆದರೆ ಇಲ್ಲಿ ಯಾರ್ ಸಹ ಯಾವ ತಪ್ಪು ಮಾಡ್ದಂಗೆ ಕಾಂಬಲೆ. ನೀವೆಲ್ಲಾ ಬಾಕಾಕನ ಬಾಯಿಗೆ ಬಂದಂಗೆ ಬೈಕಂಡ್ ಬಾಯಿ ಬಡ್ಕಂಡ್ ಬಂದರಿಯಲ್ಲಾ ಅದರ ಮುಖ್ಯ ವಿಷಯನ ಮಾತ್ರ ನಂಗೆ ಹೇಳಿತ್ತೇಳಿ ಅವರ್‌ನ ಕೇಳಿಕಂಡೆ ಬಂದವೆಲ್ಲಾ ಸಮ್ಮನಾದೊ. ಒಬ್ಬೊಬ್ಬರ್ ಮುಖ ಮುಖ ನೋಡಿಕೆ ಸುರು ಮಾಡ್ಡೊ. ಆಗ ನಾನೇ ಹೇಳ್ದೆ ಕಣ್ಣಿಗೆ ಕಂಡರೂ ಪರಾಂಬರಿಸಿ ನೋಡಕುತ್ತೇಳುವ ಒಂದು ಗಾದೆ ನಿಮಿಗೆಲ್ಲಾ ಗೊತ್ತಿರುದುತ್ತೇಳುವ ಭಾವನೆ, ಇರಲಿ.

ನಾನ್ ಒಂದು ಗೃಹಿಣಿತ್ತೇಳುವ ಸಂಸಾರ ಹೆಂಗಿದ್ದದೆ. ಆ ಕುಟುಂಬನ ಮತ್ತೆ ಆ ಮನೆತನದ ಬೆಳವಣಿಗೆಗಳ್ನ ಹೆಂಗೆ ನಡ್ಸ್‌ಕಂಡ್ ಹೋದವೆ. ಅವು ಇನ್ನೊಬ್ಬರಿಗೆ ಹೆಂಗೆ ಮಾದರಿ ಆದವೆ ಅವು ಅವರ ಸಂತೋಷದ ಜೀವನ ಹೆಂಗೆ ಸಾಗಿಸುವೆತ್ತೇಳ್ದನ್ನ ತಿಳ್‌ಕಂಡ್ ವಿಚಾರನ ಎಲ್ಲಾ ಮಿತ್ರ ಕುಟುಂಬಸ್ಥರಿಗೆ ತಿಳಿಸನೋತ್ತೇಳಿ ಒಂದು ಕಥೆ ಬರೆಯುವ ಅಭಿಪ್ರಾಯಲಿ ಒಂದು ಸಮೀಕ್ಷೆ ಮಾಡುತಿರ್ದು ಅದ್‌ಕ್ಕಾಗಿ ಆರಿಸಿಕೊಂಡ ಈ ಕುಟುಂಬ ನೀವೆಲ್ಲಾ ಈ ಮನೆಗೆ ಬಂದ ಒಂದೆ ಕ್ಷಣಲಿ ಸುಮ್ಮನಾಗಿ ಬಿಟ್ಟರಲ್ಲಾ ಆ ಗೃಹಿಣಿತ್ತೇಳುವ ಒಂದು ಲಕ್ಷಣ. ಆ ಗೃಹಿಣಿತನನ ನಾವು ನೀವೆಲ್ಲಾ ಅರ್ಥ ಮಾಡಿಕಂಡ್ ಅವರಂಗೆ ನಡ್ರೆ ಮಾತ್ರ ಈ ಪ್ರಪಂಚಲಿ ಸದಾ ಸುಖಿಂದ ಬದ್‌ಕಿ ಬಾಳಕ್, ಗಂಡ್, ಹೆಣ್, ಮಕ್ಕ, ಮರಿತ್ತೇಳ್ದು ಎಲ್ಲವರ ಸಂಸಾರಲಿ ಉಟ್ಟು, ಒಂದೊಂದು ಸಲ ಸಣ್ಣ ಪುಟ್ಟ್ ವಿಷಯಕ್ಕಾಗಿ ಬೇಜಾರಾಗಿ ಒಂದೊಂದು ಸಲ ಸಣ್ಣ ಪುಟ್ಟ ವಿಷಯಕ್ಕಾಗಿ ಬೇಜಾರಾಗಿ ಒಂದೊಂದು ಅನರ್ಥ ಮಾತ್‌ಗಳ್ನಾಡಿಕಂಡವೆ. ಆದರೆ ಅದನ್ನ ಹಗ್‌ರ ಮಾಡಿಕಂಡ್ ಆ ಕ್ಷಣಲಿ ಮರೆಯಕು. ಇರುವ ಅಂಬಲಿ ಗಂಜಿನ ಹಂಚಿಕಂಡ್ ಉಣ್ಣಕು ತನ್ನ ಸಂಸಾರದ ಅಭಿವೃದ್ಧಿಗಾಗಿ ದುಡಿಯಕು. ಒಂದೆರಡು ಕಾಸು ತಾನು ಸಂಪಾದನೆ ಮಾಡ್ದ್‌ರ್‌ಲಿ ಉಳಿಸಿಕೆ ಕಲಿಯಕು, ಅನ್ನ ತನ್ನ ಮಕ್ಕಳ ಭವಿಷ್ಯಕ್ಕಾಗಿಯೇ ಅಥವಾ ಅವು ಪ್ರಯಸ್ತರಾಗಿ ಅನಾರೋಗ್ಯದಲ್ಲಿ ಇರುವಂತ ಸಮಯ ಬಂದರೆ ಆ ಸಂದರ್ಭಲಿ ಉಪಯೋಗಿಸಿಕ್ಕಾಗಿ ಇಡಕು. ಅಂದರೆ ಖರ್ಚಿ ಕಡಿಮೆ ಮಾಡಿ ದುಡಿಮೆ ಆದಷ್ಟು ಹೆಚ್ಚಿಗೆ ಮಾಡಿ. "ಹಾಸಿಗೆ ಇದ್ದಷ್ಟ್ ಕಾಲು ಚಾಚಕುತ್ತೇಳುವಂಗೆ ಪ್ರಪಂಚಲಿ ಕಾಂಬದೆಲ್ಲಾ ನಮಿಗೆ ಬೇಕುತ್ತೇಳುವ ಅತಿ ಆಸೆ ಇರ್‌ಕಾಗದ್ ಆದರೆ ಆಸೆ ಬೇಕು. ಆಸೆ ಇಲ್ಲದಿದ್ದರೆ ಬದಕುತ್ತೇಳ್ದು ಇಲ್ಲೆ ಇದನ್ನೆ ಆದಾರವಾಗಿ ಇಟ್ ಕಂಡ್ ಸರ್ವರಿಗೂ ಮಾದರಿಯಾಗಿ ಬಾಳುವ ರಾಮಣ್ಣ ಗೌಡರ ಸಂಸಾರ ಮಾದರಿಯಾಗಿಟ್ಟು, ಇದಕೆಲ್ಲಾ ಮುಖ್ಯ ಕಾರಣ ಒಂದು ಗೃಹಿಣಿ, ಸಂಸಾರದ ಸುತ್ತಮುತ್ತಲ ವಿಚಾರಗಳ್ನ ಇನ್ ಸ್ವಲ್ಪ ಸ್ವಲ್ಪವಾಗಿ ತಿಳ್‌ಕಣೊ.

ಅವರ ಮನೆಗೆ ಹೋಕಾಕನ ಅವರ ಮನೆಯಂಗಳ್ ಮುಟ್ಟ್‌ಕಾಕನ ಗೊತ್ತಾತ್ ಅವರ ಮನೆಯ ಮನೆಯ ಮುಂದಿರುವ ಪ್ರಕೃತಿ ಸೌಂದರ್ಯ ಅವರ ಮನೆಗೆ ಹೊಂದಿಕೊಂಡಿದ್ದ ಅಲ್ಪ ಸ್ವಲ್ಪ ಜಾಗಲಿ ಒಂದು ದೊಡ್ಡದಾದ ಅಂಗಳ, ಅಂಗಳದ ಬದಿಗಳ್‌ಲಿ ಅಂದರೆ ಅವರ ವಾಸದ ಮನೆ ಸುತ್ತಲೂ ಬಣ್ಣ ಬಣ್ಣದ ಹೂಗಿಡಗ ನೋಡಿಕೆ ಕುಸಿ ಆಗ್‌ತಿತ್. ಅದರ ಬದಿಗಳ್‌ಲಿ ದಿನ ನಿತ್ಯಕ್ಕೆ ಅಥವಾ ಸಮಯ ಸಂದರ್ಭಗಳಿಗೆ ಬೇಕಾದಂಗೆ ಮದ್ದ್ ಗಿಡಗ ಮನೆಂದ ಸ್ವಲ್ಪ ದೂರಲಿ ಒಂದು ದನದ ಹಟ್ಟಿ (ಕೊಟ್ಟಿಗೆ) ಅದ್‌ರ್‌ಲಿ ಎರಡ್ ಹಸ್‌ಗ ಒಂದು ಕರ್ ಬುಡುವ ಹಸ್. ಇನ್ನೊಂದು ಗಬ್ಬದ ಹಸ್, ಇನ್ ಸ್ವಲ್ಪ ದೂರಲಿ ಒಂದು ಕೋಳಿ ಗೂಡು ಅದ್‌ರ್‌ಲಿ ಒಂದು ಹುಂಜ ಮತ್ತೆ ಹತ್ ಹೆಂಟೆ ಕೋಳಿಗ. ಖರ್ಚಿಗೆ ಬೇಕಾದಷ್ಟ್ ಕೋಳಿಮಟ್ಟೆ ಸಿಕ್‌ತಿತ್. ಅದ್‌ಕ್ಕಿಂತ ಸ್ವಲ್ಪ ದೂರಲಿ ಒಂದು ಸೌದೆ ಕೊಟ್ಟಿಗೆ ಅದ್‌ರ್‌ಲಿ ಮಳೆಗಾಲದ ಅಡಿಗೆಗೆ ಮತೆ ಮಿಯಕೆ ಗುಡ್ಡದ ಒಳೆಗಿರುವ ಸೌದೆ

ಒಟ್ಟಿ ಮಡ್‌ಗಿದ್ದೊ. ಅದ್‌ಕ್ಕಿಂತ ಸ್ವಲ್ಪ ದೂರಲಿ ಒಂದು ಗೊಬ್ಬರದ ಗುಂಡಿ ಈ ಎರಡ್ ದನದ ಕೊಟ್ಟಿಗೆಗೆ ದಿನಾ ಹಸಿ ಸೊಪ್ಪು ತಂದ್ ಹಾಕಿ ಸಗಣಿ ಗೊಬ್ಬರ ಮಾಡ್ತು. ಅಲ್ಲೆ ಒಂದ್ ಗೊಬ್ಬರ ಗ್ಯಾಸ್ ಗುಂಡಿ ಅದ್‌ರ್‌ಂದ ಬರುವ ಗ್ಯಾಸ್ ಮನೆ ಅಡುಗೆಗೆ ಸಾಕಾಗ್‌ತ್ತಿತ್ತ್ ಗಡ. ದಿನಾ ಬೆಳಿಗೆ ಎದ್ದ್ ಮನೆಯಂಗಳ್ ಗುಡಿಸಿ ಮೂಡನ ಮೆಟ್‌ಕಲ್ ಹತ್ತಿರ ಸಗಣಿ ಸಾರಿಸಿ ರಂಗೋಲೆ ಹಾಕಿ, ಮೂಡನ ಬಾಗ್‌ಲ್ ಕಟ್ಟಳೆ ಮ್ಯಾಲೆ ಒಂದು ಲಕ್ಷ್ಮೀ ವೆಂಕಟರಮಣನ ಫೋಟೋ ಬಾಡೆಲಿ ನೆಲ್ಲಕ್ಕಿ ದೀಪ ಹೊತ್ತುತ್ತಿರ್ದು ಇದನೆಲ್ಲಾ ನಡ್ಸ್‌ಕಂಡ್ ಬಾತಿರ್ದು ಆ ಗೃಹಿಣಿ ಸರೋಜಮ್ಮ ಒಬ್ಬನೇತ್ತೇಳಿ ಗ್ಯಾನ ಮಾಡಬಡಿ. ಒಂದೇ ಕೈಯಿಂದ ಚಪ್ಪಾಳೆ ಹೊಡೆಯಕ್ಕಾದುಲೆ. ಅವರ ಪತಿ ರಾಜಣ್ಣ ಗೌಡ್ರ ಮತ್ತೆ ಅವರ ಮಕ್ಕಳ ಸಹಾಯಂದ ಆದರೆ ಸರೋಜಮ್ಮನ ಆದರ್ಶ ಸಲಹೆಗ ಇವುಕೆ ಒಟ್ಟಾರೆ ಇದ್ದದ್ ಎರ್ಡ್ ಎಕ್ರೆ. ಕಾಫಿ ತೋಟ ಇದರ ಬೇಲಿ ಸುತ್ತಲೂ ಒಳ್ಳೆ ಮೆಣಸ್ ಬಳ್ಳಿಗ ದೂರ ದೂರ ಒಂದೊಂದು ಬಾಳೆಗ ಕಿತ್ತುಳಿ ಮರಗ, ನಿಂಬುಳಿ ಗಿಡಗ, ಒಂದೆರಡು ಬಾಳೆ ಗಿಡಗ, ತೆಂಗಿನ ಮರಗ ತೋಟದ ಒಳಗೆ ಹೋಕಾಕನ ದಾರಿ ಬದಿಲಿ ಒಂದೆರಡ್ ಕಾಯಿ ಮೆಣಸ್ ಗಿಡಗ, ಅವರೆ ಬಳ್ಳಿಗ, ಇಲಾತಿ ಚೆಟ್ಸ್ ಬಳ್ಳಿಗ, ಹಾಗಲಕಾಯಿ ಬಳ್ಳಿಗ, ಒಂದು ಅಡಿಗೆ ಬೇವಿನ ಗಿಡ (ಮರ) ಇಷ್ಟೆಲ್ಲಾ ಇದ್ದ ಮ್ಯಾಲೆ ಅವರ ಕುಸಿ ಕುಸಿಯಾದ ಊಟ ತಿಂಡಿಗ ಇದನ್ನೆಲ್ಲಾ ನಡ್ಸ್‌ಕಂಡ್ ಕಾಪಾಡಿಕಂಡ್ ಬರ್‌ತಿತ್ತ್. ಆ ಸರೋಜಮ್ಮ ಇವರ ಆದರ್ಶ ಜೀವನನ ನಾವು ನೀವೆಲ್ಲವು ಕೇಳಿ ಹಂಗೆ ಬದುಕಿ ಬಾಳಿಕೆ ಕಲಿಯೋನೋ ಅದು ಅಲ್ಲದೆ ನಿಮ್ಮ ಮುಂದೆನ ಪೀಳಿಗೆಯವುಕೆ ಸಹ ತಿಳಿಸುದು ನನ್ನ ಉದ್ದೇಶ.

---

**ಪಯಸ್ವಿನಿ ತೀರದ ಮಳೆ**

ನಮ್ಮೂರ್ನೋಲೆ ಜಡಿಮಳೆ ಹೊಡ್ದರೆ
ಹೊಯ್ದಾಂಗಿದ್ದದೆ ಧಾರೆ;
ಪಯಸ್ವಿನಿ ಉಟ್ಟದೆ ಭಾರೀ ಉದ್ದದ
ಮಣ್ಣಿನ ಬಣ್ಣದ ಸೀರೆ!

**ಕುತ್ಯಾಳ ನಾಗಪ್ಪ ಗೌಡ(ಕಿರಣ)**

# ಅಮರ ಕಲ್ಯಾಣ ಕ್ರಾಂತಿ

ಅರೆಬಾಷಾ ತರಂಗ ರೂಪಕ

**ವಿದ್ವಾನ್ ಟಿ.ಜಿ ಮುಡೂರು**

(ಹೆಣ್ಣ್‌ಗ-ಮೇಳಲಿ ಹಾಡ್‌ವೆ)

ಕಲ್ಯಾಣವೆ ಜೋ ಜೊ ಕಲ್ಯಾಣವೆ ... ಕಲ್ಯಾಣವೆ ಜೋಜೊ ಕಲ್ಯಾಣವೆ ...
ಕಲ್ಯಾಣ ಕಲ್ಯಾಣ ಕಲ್ಯಾಣವೆ ... ಕಲ್ಯಾಣ ಕಲ್ಯಾಣ ಕಲ್ಯಾಣವೆ ...
ಕಲ್ಯಾಣವೆ ಸ್ವಾಮಿ ಕಲ್ಯಾಣವೆ ... ಕಲ್ಯಾಣವೆ ಜೋಜೊ ಕಲ್ಯಾಣವೆ ...
ಕಲ್ಯಾಣವೆ ಕ್ರಾಂತಿ ಕಲ್ಯಾಣವೆ ... ಕಲ್ಯಾಣ ಕಲ್ಯಾಣ ಕಲ್ಯಾಣವೆ ...
ಕಲ್ಯಾಣವೆ ಶಿವನೆ ಕಲ್ಯಾಣವೆ ... ಕಲ್ಯಾಣವೆ ಜೋಜೊ ಕಲ್ಯಾಣವೆ ...
ಕಲ್ಯಾಣವೆ ಅಮರ ಕಲ್ಯಾಣವೆ ... ಕಲ್ಯಾಣ ಕಲ್ಯಾಣ ಕಲ್ಯಾಣವೆ...
ಕಲ್ಯಾಣವೆ ಸ್ವಾಮಿ ಕಲ್ಯಾಣವೆ ... ಕಲ್ಯಾಣವೆ ಶಿವನೆ ಕಲ್ಯಾಣವೆ...
ಕಲ್ಯಾಣವೆ ಅಮರ ಕಲ್ಯಾಣವೆ ... ಕಲ್ಯಾಣವೆ ಕ್ರಾಂತಿ ಕಲ್ಯಾಣವೆ ...

ನಿರೂಪಕ : ನಮ್ಮದ್ ಸೊತಂತ್ರ ಭಾರತ

ನಿರೂಪಕಿ : ನಾವ್ ಸೊತಂತ್ರ ಭಾರತದ ಪ್ರಜೆಗ

ನಿರೂಪಕ : ಭಾರತಕ್ಕೆ ಸೊತಂತ್ರ ಸಿಕ್ಕಿ ಅರವತ್ತ್ ವರ್ಸ ಮೀರಿ ಕಾಲ ಕಳ್ತ್

ನಿರೂಪಕಿ : ಸೊತಂತ್ರಕ್ಕೆ ಹೋರಾಡಿದ ಆ ನಮ್ಮ ಹಿರಿಯರ ಗೇನ ನಮ್ಮಲ್ಲಿ ಇಂದಿಗೂ ಉಳ್ತ್

ನಿರೂಪಕ : ಸುಳ್ಯ ಅಮರ ಸೀಮೆಯ ಮನೆಮನೆಲಿ ತೊಟ್ಟಿಲ್ ತೂಗೋ ಅವ್ವಂದಿರ ಜೋ ಜೋ ಅಮರ ಕ್ರಾಂತಿಯ ನೆಂಪು ಕೊಟ್ಟದೆ

ನಿರೂಪಕಿ : ಮಹಾತ್ಮಾ ಗಾಂಧಿ ಮುಂದೆ ನಿಂತ್ ಮಾಡ್ದ ಸತ್ಯಾಗ್ರಹ ಅಹಿಂಸಾ ಚಳವಳಿಂದ ಭಾರತಕ್ಕೆ 1947ರಲ್ಲಿ ಸೊತಂತ್ರ ಸಿಕ್ರೂ ದೇಸಕ್ಕೆ ಸೊತಂತ್ರ ಸಿಗಿಕೆ ಇನ್ನೂರು ವರ್ಸ ಮೊದ್ಲೆ ನಡ್ದ ಉತ್ತರದ ಸಿಪಾಯಿ ದಂಗೆನ-ಕರ್ನಾಟಕದ ಕಿತ್ತೂರು-ನರಗುಂದ ಬಂಡಾಯಗಳ ಮರೀಕೆಬತ್ತ್

ನಿರೂಪಕ : ಉಳ್ಳಾಲಲಿ ತುಳನಾಡ ರಾಣಿ ಅಬ್ಬಕ್ಕ ಮಾಡ್ದ ಹೋರಾಟ-ಸುಳ್ಯ ಅಮರ ಸೀಮೆಲಿ ಎದ್ದ ಕಲ್ಯಾಣ ಕ್ರಾಂತಿಯ ತಪ್ಪದೆ ನೆನೆಯೊಕು

ನಿರೂಪಕಿ : ಇಂಗ್ಲೀಷ್ ಕಂಪ್ನಿ ಸರಕಾರದ ಇದಿರ್ ಕಾದಿ ಸತ್ತ್ ಹೆಸ್ರ್ ಮಾಡ್ದ ಗಂಡ್ ಹೆಣ್ಣ್‌ಗಳ ಜತೆ ಹೇಳಿಕೆ ಹೆಸ್ರ್ ಸಿಗದ ಆನೇಕರ್ ಪ್ರಾಣ ಕೊಟ್ಟೊಳೊ

ನಿರೂಪಕ : ಸೊತಂತ್ರಕ್ಕಾಗಿ ಹೋರಾಟ ಮಾಡ್ದ ನಮ್ಮ ಹಿರಿಯರ ಗೇನ ನಮ್ಮ ಮಕ್ಕಲ್ಲಿ ಏಗಳೂ ಉಳಿಯೋಕು ಇಂಥ ಹೋರಾಟಲಿ.............

ನಿರೂಪಕಿ : 1837 ಮಾರ್ಚ್ ತಿಂಗ 30 ರಂದ್ ಕನ್ನಡ ಕೊಡಗ್ ಜಿಲ್ಲೆಗ ಒಂದಾಗಿ

ಆಳುವ ಕಂಪ್ನಿ ಸರ್ಕಾರದ ಇದಿರ್ ರೈತಜನ ಒಂದಾಗಿ ಎದ್ದ ಮೊದಲ ದಂಗೇನೆ ಅಮರ ಕಲ್ಯಾಣ ಕ್ರಾಂತಿ (ಸಣ್ಣಕೆ ಜೋ ಜೋ ಹಾಡ್ ಕೇಳಿಬಂದದೆ)

ನಿರೂಪಕ : ಕಲ್ಯಾಣ ಕಾಟಕಾಯಿ ಹೆಸ್ರಿನ ಈ ಅಮರಕಲ್ಯಾಣ ಕ್ರಾಂತಿ ಈ ದೇಸಲಿ ನಡ್ದ ಮೊದಲ ಸೊತಂತ್ರ ಹೋರಾಟ –ಇದ್ ಸುಳ್ಯ ಅಮರ ಸೀಮೆ ಹೆಸ್ರ್ ಎತ್ತಿ ಕಂಡದೆ

ನಿರೂಪಕಿ : ಇಂದಿನ ಸುಳ್ಯತಾಲೂಕ್ ಪ್ರದೇಸ ಅಂದ್ ಕೊಡಗ್ ಅರಸಾರಾಳಿಕೆಗೆ ಒಳಪಟ್ಟಿತ್ತ್

ನಿರೂಪಕ : ಸುತ್ತಂದ ವಸಮಾಡಿಕೊಂಡು ಬಂದ ಇಂಗ್ಲೆಂಡ್ ಕಂಪ್ನಿಗೆ ಕೊಡಗ್ ಕೂಡ ವಸವಾತ್– ಕೊಡಗರಸು ಚಿಕವೀರರಾಜನ ಕಂಪ್ನಿ ಸರಕಾರ ಪಟ್ಟಂದ ಇಳ್ಸಿ ಗಡಿಪಾರು ಮಾಡ್ತ್

ನಿರೂಪಕಿ : ಜತೆಗೆ ಸುಳ್ಯ ಪುತ್ತೂರು ಬೆಳ್ತಂಗಡಿ ಪ್ರದೇಸಗಳ ಕನ್ನಡ ಜಿಲ್ಲೆಗೆ ಸೇರಿಸ್ತ್

ನಿರೂಪಕ : ರೈತಜನ ಬೆಳೆ ಪಸ್ಲು ರೂಪಲಿ ಕೊಡ್ತಿದ್ದ ಕಂದಾಯ ನಗದ್ ರೂಪಲಿ ಕೊಡೊಕುಂತ ಕಂಪ್ನಿ ಆಜ್ಞೆಮಾಡ್ತ್

ನಿರೂಪಕಿ : ಬೆಳೆದ ಬೆಳೆ ಪಸ್ಲ್ ಮಾರಾಟಂದ ಕಂದಾಯಕ್ಕೆ ಹಣ ಬರದೆ ದುಡಿದ ಜನ ಕಂಗಾಲಾದೊ

ನಿರೂಪಕ : ಅತ್ತ ಕಂಪ್ನಿಯ ಕಂದಾಯ–ಕಾನೂನು–ಮತ ಧರ್ಮ ಬದಲಾವಣೆಗೆ ಜನ ಎದ್‌ರಾದೊ –ಇತ್ತ ಕೊಡಗ್ ದಿವಾನನ ತಮ್ಮ ಅಟ್ಲೂರು ರಾಂಪ್ಪಯ್ಯನ ದಬ್ಬಾಳಿಕೆಗೆ ಬಲಿಯಾದೊ.

ನಿರೂಪಕಿ : ಇದೇ ಹೊತ್ತಿಗೆ ಸುಳ್ಯ ಕೊಡಗ್ ಸೀಮೆಯರೊಟ್ಟಾಗಿ ಜನ ದಂಗೆಗೆ ತಯಾರಾದೊ

ನಿರೂಪಕ : ಜನ ದಂಗೆಯೆದ್ದೊ

(ಗಂಡ್‌ಗ–ಮೇಳಲಿ ಹಾಡ್‌ವೆ )

ಎದ್ದವೊ ಜನ ವೆದ್ದವೊ ................. ಎದ್ದವೊ ಜನ ವೆದ್ದವೊ................

ಕಂಪ್ನಿಗೇ ಇದಿರಾಗಿ ಅಮರ ಕ್ರಾಂತಿ ದಿನ ಗಡುವಿಟ್ಟವೊ ........ ಎದ್ದವೊ ಜನ ವೆದ್ದವೊ.......

ಗದ್ದೆಊಟೆಯ ನೇಗಿಲನ ಹಿಡಿ ಕೈಲ ಅಡ್ಡಣ ಹಿಡಿದವೊ.

ಈಟಿ ಕತ್ತಿ ಕಠಾರಿ ಕಡ್ತಲೆ ಕೊಡಲ ಸಾಣೆಗೆ ಕೊಟ್ಟವೊ ........... ಎದ್ದವೊ ಜನ ವೆದ್ದವೊ

ಕವಣೆ ಕಲ್ ಬಿಲ್ ಪಗರಿಯ

ಗುಂಡು ಕೇಪಿನ ಕೋವಿಯ ................

ಎದ್ದವೊ ಜನ ವೆದ್ದವೊ ... ಎದ್ದವೊ ಜನತಿದ್ದವೊ

ಸುತ್ತ ಮುತ್ತಣ ಹತ್ತ್ ಊರಿನ ದಡಿಗರೊಟ್ಟಿಗೆ ಸೇರಿದೊ

ಹೊಲದ ಕೆಲಸದ ಜತೆಗೆ ಹೆಣ್ಣ್‌ಗ ಮನೆಯ ತೊಟ್ಟಿಲ ತೂಗಿದೊ... ಎದ್ದವೊ ಜನ ವೆದ್ದವೊ

ಸದ್ದ್ ಮಾಡದೆ ದಿನವಿಡಿ... ಸುದ್ದಿ ಹರಡಿದೊ ಊರಿಡಿ...

ಎದ್ದವೋ ಜನ ವೆದ್ದವೋ... ಎದ್ದವೊ ಜನ ವೆದ್ದವೊ

ನಿರೂಪಕ : ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯ –ಪಂಜ– ಬೆಳ್ಳಾರೆ –ಸಂಪಾಜೆ –ಅರಂತೋಡು...

ನಿರೂಪಕಿ : ಕೊಡಗ್‌ನ ಭಾಗಮಂಡ್ಲ –ಸೋಮಾರ್‌ಪೇಟೆ –ಶನವಾರ ಸಂತೆ –ಕೊಡ್ಲಿಪೇಟೆ ಜನ ಜಮೆಯಾದೊ

ನಿರೂಪಕ : ಕೂಜುಗೋಡು ಅಪ್ಪಯ್ಯ –ಅಮ್ಮೆ ಮಲ್ಲಪ್ಪ –ಕೆದಂಬಾಡಿ ರಾಮ – ಕಳ್ಳಿಗೆ ಅಣ್ಣಿ –ಅಡ್ಕಾರು ಸುಬ್ರಾಯ– ಉಳುವಾರು ರಾಮಯ್ಯ –ಕುಡೆಕಲ್ಲು ಗೌಡಜ್ಜ –ಕುಂಚಡ್ಕ ತಿಮ್ಮ, ಪರಿವಾರ ದೇವಪ್ಪ,– ಸುಳ್ಯಕೋಡಿ ಕೃಷ್ಣಪ್ಪ, – ಚೊಕ್ಕಾಡಿ ಮಾಲಿಂಗ ಹೆಸ್ರಿನ ಅಮರಸಿಮೇಯ ಗೌಡುಗಳ ಜತೆ ......

ನಿರೂಪಕಿ : ಕೊಡಗ್‌ಂದ ಗುಡ್ಡೆಮನೆ ಅಪ್ಪಯ್ಯ –ಹುಲಿಗುಂದ ನಂಜಯ್ಯ, –ಮಂಡೀರ ಉತ್ತಯ್ಯ –ಶಾಂತಳ್ಳಿ ಮಲ್ಲಯ್ಯ –ಗೌಡುಗೊ ಮುಂದಾಗಿ ಬಂದ್ ದಂಗೆಗೆ ಸೇರ್‍ಕೊಂಡೊ

ನಿರೂಪಕ : ಅಮರಕ್ರಾಂತಿಗೆ ಗೌಡಜನ ಮುಂದಾಕನ ಪೆರಾಜೆಯ ಬೀರಣ್ಣ ರೈ –ಕೃಷ್ಣಯ್ಯ – ಸುಳ್ಯ ಸೋಮಾಯಾಜಿ ಕೆಲ್ಸಿಕಟ್ಟೆ ಮಮ್ಮದೆ ಬ್ಯಾರಿ – ಮಡಿಕೇರಿಯ ಚೆಟ್ಟಿಕುಡಿಯ ಕರ್ತು ಕುಡಿಯರ್ ಕೂಡಿಕೊಂಡೊ

ನಿರೂಪಕಿ : ಧರ್ಮಸ್ಥಳದ ಮಂಜು ಪೆರ್ಗಡೆ –ನಂದಾವರದ ಲಕ್ಷ್ಮಪ್ಪರಸು –ಕುಂಬ್ಳೆ ಸುಬ್ರಾಯ –ಬಂಟ ಬ್ಯಾರಿ ಬ್ರಾಣ ಜೈನ ಕುಡಿಯರ್ ಹೀಂಗೆ ಹತ್ತು ಹಲವು ಜಾತಿ ಜನ ಒಂದಾದೊ

ನಿರೂಪಕ : ಅಮರ ಕ್ರಾಂತಿಗೆ ಹೆಚ್ಚಿನ ಜನ ಮುಂದಾಕನ ಇದ್ ಗೌಡ್ರದಂಗೆ ಅಲ್ಲ–ಎಲ್ಲಾ ರೈತ ಜನಂಗಳ ದಂಗೆಂತ ಸರ್ಕಾರಕ್ಕೆ ತೋರ್ಸಿಕೊಟ್ಟೊ (ಹಾಡ್–ಎದ್ದವೊ ಜನವೆದ್ದವೊ)

ನಿರೂಪಕಿ : ಬ್ರಹ್ಮಗಿರಿಯ ಪಯಸ್ವಿನಿ – ಕುಮಾರಪರ್ವತದ ಕುಮಾರಧಾರೆ – ಕುದ್ರೆಮುಖದ ನೇತ್ರಾವತಿ ನದಿಗ ಹುಟ್ಟಿ ಹರಿದ್ ಒಂದಾಗಿ ಕಡಲ್ ಕೂಡ್ದ ಹಾಂಗೆ ಆ ನದಿ ನೀರ್ ಕುಡ್ದ ಜನ ಒಂದಾದೊ

ನಿರೂಪಕ : ಗಟ್ಟಂದ ಕಡಲವರೆಗೆ ಈ ನಾಡ್ನ ಕಂಪ್ನಿ ಕೈ ತಪ್ಸಿ ಕಲ್ಯಾಣ ರಾಜ್ಯ ಕಟ್ಟಿಕೆ ತಯಾರಾದೊ

ನಿರೂಪಕಿ : ಕೊಡಗಿನ ಪಟ್ಟಕ್ಕೆ ಹಕ್ಕುದಾರರಾದ ಕಲ್ಯಾಣ ಸ್ವಾಮಿ –ಅಪರಂಪರರ ಕ್ರಾಂತಿಗೆ ಸೇರೊಕುಂತ ಬಾಕೆ ಜನ ಕಳ್ಸಿದೊ

ನಿರೂಪಕ : ಇತ್ತ ಸುಳ್ಯದ ಪೂಮಲೆ ಕಾಡಿಲಿ ಕೆದಂಬಾಡಿ ರಾಮನ ತಯಾರಿಕೆಲಿ ಎರಡ್‌ಸಾವ್ರ ಹೊಂತಗಾರಿಗ ಗರಡಿ ಅಭ್ಯಾಸಕ್ಕೆ ಸುರುಮಾಡಿದೊ

ನಿರೂಪಕಿ : ಅತ್ತ ಕೊಡಗಿನ ಕ್ಯಾಪ್ಟನ್ ಲೀ ಹಾರ್ಡಿಗೆ ಸುಳ್ಯಲಿ ದಂಗೆ ಎದ್ದವೆಂತ ಅಟ್ಲೂರು ರಾಂಪ್ಪಯ್ಯನ ಮುಖಾಂತ್ರ ಗೊತ್ತಾತ್, ಕೊಡಗಿನ ದಿವಾನ್ ಬೋಪು ಲಕ್ಷ್ಮೀನಾರಾಯಣ ಕೊಡಗರ ಸೇರ್ಸಿ ಕಂಪ್ನಿ ಸರ್ಕಾರ ಸುಳ್ಯದ ದಂಗೇನ

ತಡೆವ ತಂತ್ರಲಿ ತೊಡಗಿತ್

ನಿರೂಪಕ : ಕ್ರಾಂತಿಗೆ ಮೊದ್ಲೆ ಕೊಡಗಿಲಿ ಕಲ್ಯಾಣ ಅಪರಂಪರರ ಸೆರೆಹಿಡಿದೊ–ಕೊಡಗಿಲಿ ಕ್ರಾಂತಿ ಅಡಗಿಸಿಕೆ ಸುರುವಾಕನ......

ನಿರೂಪಕಿ : ಇತ್ತ ಸುಳ್ಯಲಿ ಪುಟ್ಟ ಬಸಪ್ಪ ಹೆಸರ್ನ ಹೈದನ ಕಲ್ಯಾಣ ಸ್ವಾಮೀಂತ ಕರ್‍ದೊ – ಕ್ರಾಂತಿ ಏಳುವ ಮೊದ್ಲೆ ಕೆದಂಬಾಡಿ ರಾಮನ ಮನೆ ಮದುವೆಗದ್ದೆಲಿ ಮದ್ದ್ವೆಂತ್ ಸುದ್ದಿ ಹರಡಿದೊ

ನಿರೂಪಕ : ಮದುವೆಗದ್ದೆಯ ಚಪ್ಪರದಡಿಲಿ ಸೀಮೆಯ ಜನ ಸೇರಿದೊ – ಕ್ರಾಂತಿಗಡುವಿಗೆ ಮೊದ್ಲೆ ಸೀಮೆ ಜನ ಕ್ರಾಂತಿಗೆ ತಯಾರಾದೊ

ನಿರೂಪಕಿ : ಮದುವೆಗದ್ದೆ ಕ್ರಾಂತಿಯ ಬಯಲಾತ್ – ಸೇನಾದಂಡಿಗೆ ಮುತ್ತಯಿದೆ ಹೆಮ್ಮಕ್ಕ ಸೋಬಾನೆ ಹಾಡಿ ಆರತಿ ಎತ್ತಿದೊ

( ಹೆಣ್ಣ್‌ಗ ಮೇಳಲಿ ಹಾಡ್‌ವೆ )

ಸೋಬಾನ ಸೋಬಾನ ಸೋಬಾನವೆ ... ಸೋಬಾನ ದಾರತಿ ಸೋಬಾನವೆ ...
ಸೋಬಾನ ದಾರತಿ ಸೋಬಾನವೆ ... ಸೋಬಾನ ಸೋಬಾನ ಸೋಬಾನವೆ ...
ಕಲ್ಯಾಣ ಸ್ವಾಮಿಗೆ ಸೋಬಾನವೆ ... ಸೋಬಾನ ಸೋಬಾನ ಸೋಬಾನವೆ ...
ಕಲ್ಯಾಣ ಕ್ರಾಂತಿಗೆ ಸೋಬಾನವೆ ... ಸೋಬಾನ ಸೋಬಾನ ಸೋಬಾನವೆ ...
ಪಯಸ್ವಿನ ತುಂಬಲ ಪನ್ನೀರಲ ... ಸೋಬಾನ ಸೋಬಾನ ಸೋಬಾನವೆ ...
ಪೂಮಲೆ ಅರಳಲ ಬಂಗಾರಲ ... ಸೋಬಾನ ಸೋಬಾನ ಸೋಬಾನವೆ ...
ಮುಡಿಯಲ ಬಾಡದ ಸಿಂಗಾರಲ ... ಸೋಬಾನ ಸೋಬಾನ ಸೋಬಾನವೆ ...
ಸೋಬಾನ ಸೋಬಾನ ಸೋಬಾನವೆ ... ಕಲ್ಯಾಣ ಸ್ವಾಮಿಗೆ ಸೋಬಾನವೆ ...
ಕಲ್ಯಾಣ ಕ್ರಾಂತಿಗೆ ಸೋಬಾನವೆ ... ಜಯ ಜಯದಾರತಿ ಸೋಬಾನವೆ ...
ಮುತ್ತಿನ ಆರತಿ ಸೋಬಾನವೆ ... ರತ್ನದ ಆರತಿ ಸೋಬಾನವೆ ...
ಹವಳದ ಆರತಿ ಸೋಬಾನವೆ ... ಜಯ ಜಯದಾರತಿ ಸೋಬಾನವೆ...

ನಿರೂಪಕ : ಕ್ರಾಂತಿಗೆ ಅಡ್ಡನಿಂತ ಅಟ್ಲೂರು ರಾಂಪಯ್ಯನ ದಂಡಿಗೆ ಸೇರೊಕುಂತ ಮೊದಲಾಗಿ ಜನ ಕಳ್ಸಿದೊ

ನಿರೂಪಕಿ : ಕ್ರಾಂತಿಗೆ ಅಡ್ಡಬಂದ ರಾಂಪಯ್ಯನ ತಲೆನ ಮೊದಲಾಗಿ ತುಂಡರಿಸಿದೊ

ನಿರೂಪಕ : ರಾಂಪಯ್ಯನ ತಲೆ ನೆಲಕ್ಕೆ ಬಿದ್ದದ್ದೇ ತಡ – ಜಯ ಜಯಾಂತ ಕಲ್ಯಾಣ ದಂಡ್ ಮುಂದಾತ್

ನಿರೂಪಕಿ : ಗಾಳಿಗೆ ಗುಂಡು ಹಾರಿಸಿದೊ – ಕಲ್ಯಾಣ ಬಾವುಟ ಎತ್ತಿ ಹಿಡಿದೊ– ಜಯ ಜಯಾಂತ ದನಿಯಾಡಿ ಕಲ್ಯಾಣ ದಂಡ್ ಮುಂದಾತ್

(ಗಂಡ್‌ಗ ಮೇಳಲಿ ಹಾಡ್‌ವೆ )

ಮುಂದಾತ್ ದಂಡ್ ಮುಂದಾತ್ ... ಕ್ರಾಂತಿಯ ದಂಡ್ ಮುಂದಾತ್
ಕ್ರಾಂತಿಯ ದಂಡ್ ಮುಂದಾತ್ ... ಮುಂದಾತ್ ದಂಡ್ ಮುಂದಾತ್

ತಾಗಿದವರ ತಲೆ ತುಂಡಾತ್ ... ಕ್ರಾಂತಿಯ ದಂಡ್ ಮುಂದಾತ್

ಬಾಗಿದವರ ಜತೆ ಕೂಡ್ಯಾತ್... ಮುಂದಾತ್ ದಂಡ್ ಮುಂದಾತ್

ಲೂಟಿ ದರೋಡೆಗೆ ಎಡೆಮಾಡದೆ... ಕ್ರಾಂತಿಯ ದಂಡ್ ಮುಂದಾತ್

ಹೆಮ್ಮಕ್ಕಳ ಮೇಲೆ ಕೈಮಾಡದೆ... ಮುಂದಾತ್ ದಂಡ್ ಮುಂದಾತ್

ನ್ಯಾಯದ ನಡೆಯಾಗಿ ಮುಂದಾತ್... ಧರ್ಮದ ನೆಲೆಯಾಗಿ ಮುಂದಾತ್

ಮುಂದಾತ್ ದಂಡ್ ಮುಂದಾತ್ ... ಕ್ರಾಂತಿಯ ದಂಡ್ ಮುಂದಾತ್

ಮುಂದಾತ್ ದಂಡ್ ಮುಂದಾತ್ ...

ನಿರೂಪಕ : ಪುಟ್ಟ ಬಸಪ್ಪನೆ ಕಲ್ಯಾಣ ಸ್ವಾಮಿ– ಕೆದಂಬಾಡಿ ರಾಮಗೌಡ ಮಹಾದಂಡ ನಾಯಕ–ಅಪ್ಪಯ್ಯ ನಂಜಯ್ಯ ಮಲ್ಲಯ್ಯರ್ ಮುಖ್ಯ ಸೇನಾನಿಗ – ಎಡಬಲಲಿ ಚೆಟ್ಟಿ ಕರ್ತು ಕುಡಿಯರ್

ನಿರೂಪಕಿ : ಎರಡ್ ಸಾವಿರದ ಕ್ರಾಂತಿದಂಡ್ ಬೆಳ್ಳಾರೆ ಮುಟ್ಟ್‌ಕನ ಮೂರು ಸಾವ್ರ

ನಿರೂಪಕ : ಬೆಳ್ಳಾರೆ ಖಜಾನೆ ವಶಮಾಡಿದೊ – ಪಂಜ ಸುಬ್ರಹ್ಮಣ್ಯದ ಜನ ದಂಡಿಗೆ ಜಮೆಯಾದೊ.

ನಿರೂಪಕಿ : ಕಲ್ಯಾಣ ರಾಜ್ಯಂತ ಜಾಹೀರು ಮಾಡ್ದೊ – ರೈತರ ಮೂರು ವರ್ಸದ ಕಂದಾಯ ಮಾಪಿ ಮಾಡ್ದೊ

(ಮೇಳಲಿ ಹಾಡ್–ಮುಂದಾತ್)

ನಿರೂಪಕ : ದಂಡ್ ಮುಂದಾತ್ ಕುಂಬ್ರಕ್ಕಾಗಿ ಪುತ್ತೂರು ಮುಟ್ಟ್‌ತ್

ನಿರೂಪಕಿ : ಪುತ್ತೂರು ಖಜಾನೆ ವಶವಾತ್ ಕಲ್ಯಾಣ ರಾಜ್ಯಂತ ತಾಕೀತಾತ್ ಕಲ್ಯಾಣ ಬಾವುಟ ಮೇಲೆರ್ತ್

ನಿರೂಪಕ : ಅಡಗಿಸಿಟ್ಟ ಸಂಪತ್ತನ್ನ ಹೊರಗೆಳೆದೊ ಬಡವರಿಗೆ ಹಂಚಿದೊ

ನಿರೂಪಕಿ : ಪುತ್ತೂರ್‌ಂದ ದಂಡ್ ಮುಂದಾತ್

ನಿರೂಪಕ : ದಂಡ್ ಪಾಣೆಮಂಗ್ಳೂರಿಗೆ ಮುಟ್ಟಿತ್– ನಂದಾವರದ ಲಕ್ಷ್ಮಪ್ಪರಸ ಕ್ರಾಂತಿ ದಂಡಿಗೆ ಸೇರ್‍ಯಾತ್

ನಿರೂಪಕಿ : ಧರ್ಮಸ್ಥಳ – ಬೆಳ್ತಂಗಡಿ ಜನ ಬಂದ್ ದಂಡಿಗೆ ಜಮೆಯಾದೊ( ಮೇಳಲಿ ಹಾಡ್ ಮುಂದಾತ್ )

ನಿರೂಪಕ : ಪಾಣೆಮಂಗ್ಳೂರಿಂದ ದಂಡ್ ಪರಂಗಿ ಪೇಟೆ ದಾಟಿ –ಕಡಲ ಗಡಿ ಮಂಗ್ಳೂರ್ ಮುಟ್ಟ್‌ಕನ

ನಿರೂಪಕಿ : ಸುಳ್ಯಂದ ಹೊರಟ ದಂಡಿನ ಇನ್ನೊಂದ್ ತಂಡದ ಜನಗ –ಪಯಸ್ವಿನಿ ನದಿ ಹಿಡ್ದ್ ಮುಂದಾಗಿ ಕಾಸ್ರಗೋಡ್ –ಕೂಡ್ಲ್ ಕುಂಬ್ಳೆ ಸುಬ್ರಾಯನ ಜತೆ– ಮಂಜೇಶ್ವರ ಉಳ್ಳಾಲ ನದಿದಾಟಿ ಮಂಗ್ಳೂರಿಲಿ ಕ್ರಾಂತಿ ಸೇನೇನ ಸೇರ್‌ಕೊಂಡೊ

ನಿರೂಪಕ : ಮಂಗ್ಳೂರ್ನ್ ಕಂಪ್ನಿ ಪಡೆ–ಕ್ರಾಂತಿ ದಂಡಿನ ಕಂಡ್ ಹೆದ್ರಿ –ದೋಣಿ ಮಂಜಿಗಳ

ಹತ್ತಿ–ತಲಚೇರಿಗೆ ಪಲಾಯನ ಮಾಡ್ದೊ

ನಿರೂಪಕಿ : ಮಂಗ್ಳೂರಿಲಿ ಕಂಪ್ನಿ ಖಾಲಿಯಾತ್ – ಖಜಾನೆ ಕ್ರಾಂತಿ ದಂಡಿನ ವಶವಾತ್ –ಮಂಗ್ಳೂರ್ ಜನ ಕಲ್ಯಾಣ ಕ್ರಾಂತಿ ಜತೆ ಸೇರ್ಕೊಂಡೊ

ನಿರೂಪಕ : ಜಯಕಾರಲಿ ಕಲ್ಯಾಣ ರಾಜ್ಯದ ಘೋಷಣೆ ಮೊಳಗಿತ್ –ಬಾವುಟಗುಡ್ಡೆಲಿ ಕಲ್ಯಾಣ ಬಾವುಟ ಹಾರಾಡ್ತ್

(ಗಂಡ್‌ಗ –ಮೇಳಲಿ ಹಾಡ್)

ಹಾರಾಡ್ತ್ ಮೇಲೆ ಹಾರಾಡ್ತ್ ... ಕಲ್ಯಾಣ ಬಾವುಟ ಹಾರಾಡ್ತ್ ...

ಕಡಲಿನ ಗಾಳಿಗೆ ಬಾನಲಿ ಮೇಲೇರಿ... ಹಾರಾಡ್ತ್ ಮೇಲೆ ಹಾರಾಡ್ತ್... ಕಲ್ಯಾಣ ಬಾವುಟ ಹಾರಾಡ್ತ್ ...

ಕಲ್ಯಾಣ ಕ್ರಾಂತಿಗೆ ಗೆಲುವಾತ್–ಕಂಪ್ನಿ ಸರ್ಕಾರ ಮುಳುಗ್ಯಾತ್ ಕಲ್ಯಾಣ ಬಾವುಟ ಹಾರಾಡ್ತ್ ...

ಕಲ್ಯಾಣ ರಾಜ್ಯದ ನೆಲೆಯಾತ್–ಕಲ್ಯಾಣ ಬಾವುಟ ಮೇಲೇರ್ತ್ – ಹಾರಾಡ್ತ್ ಮೇಲೆ ಹಾರಾಡ್ತ್ ...

ಕಲ್ಯಾಣ ರಾಜ್ಯಕೆ ಜಯವಾತ್ – ಕಲ್ಯಾಣ ಬಾವುಟ ಹಾರಾಡ್ತ್...

ಹಾರಾಡ್ತ್ ಮೇಲೆ ಹಾರಾಡ್ತ್ ... ಕಲ್ಯಾಣ ಬಾವುಟ ಹಾರಾಡ್ತ್ ...

ನಿರೂಪಕಿ : ಕಂಪ್ನಿ ಸರ್ಕಾರ ಹಾಕ್ದ ಉಪ್ಪಿನ ತೆರಿಗೆನ ಕಲ್ಯಾಣ ಸರ್ಕಾರ ರದ್ದ್ ಮಾಡ್ತ್. ಮಂಗ್ಳೂರ್ನ ವ್ಯಾಪಾರಿಗ ಒಪ್ಸಿದ ಕಪ್ಪಕಾಣಿಕೆಗಳ ಬಡವರಿಗೆ ಹಂಚಿತ್

ನಿರೂಪಕ : ಮಂಗ್ಳೂರು ವಶವಾತ್ ಮುಂದೆ ಕೊಡಗಿನ ವಶಮಾಡಿಕೆ.......

ನಿರೂಪಕಿ : ಗುಡ್ಡೆಮನೆ ಅಪ್ಪಯ್ಯ –ಅಮ್ಮೈ ಮಲ್ಲಯ್ಯರ್– ಬಿಸಿಲೆ ಸಂಪಾಜೆ ಗಾಟಿಲಿ ದಂಡಿನ ಮುನ್ನಡೆಸಿದೊ

ನಿರೂಪಕ : ಕೊಡಗಿಲಿ ಕ್ಯಾಪ್ಟನ್ ಲೀ ಹಾರ್ಡಿಯ ಮೋಸ ತಂತ್ರಕ್ಕೆ – ಕ್ರಾಂತಿ ದಂಡಿಗೆ ಸೋಲಾತ್.

ನಿರೂಪಕಿ : ಹೋರಾಟಲಿ ಕಂಪ್ನಿ ತುಪಾಕಿಗೆ ಕ್ರಾಂತಿ ಪಡೆಯ ಭಾರಿ ಜನ ಜೀವ ಕೊಟ್ಟೊ– ಕೆಲಜನ ತಲೆಮರೆಸಿಕೊಂಡೊ

ನಿರೂಪಕ : ಮಂಗ್ಳೂರಿಗೂ ಮಲಬಾರಿಂದ ಬಂದ ಕಂಪ್ನಿ ಸೇನೆ ಕಲ್ಯಾಣ ದಂಡಿನ ಸೆರೆ ಹಿಡ್ತ್

ನಿರೂಪಕಿ : ಹದಿಮೂರು ದಿನ ಹಾರಾಡ್‌ದ ಕಲ್ಯಾಣ ಬಾವುಟ ಕೆಳಗಿಳ್ತ್. – ಕಲ್ಯಾಣ ರಾಜ್ಯದ ಆಸೆಗೆ ಅಂತ್ಯಾತ್

ನಿರೂಪಕ : ತಲೆಮರ್ಸಿಕೊಂಡ ಕೆದಂಬಾಡಿ ರಾಮ – ಪುಟ್ಟ ಬಸಪ್ಪರ ತಲೆಗೆ ಹತ್ತ್ ಸಾವ್ರ ರೂಪಾಯಿ ಇನಾಂ ಜಾಹೀರ್ ಮಾಡಿ ಒಳಸಂಚಿಂದ ಅವರನ್ನ ಕಂಪ್ನಿ ಸೆರೆಹಿಡ್ತ್

ನಿರೂಪಕಿ : ಕೊಡಗಿಲಿ ಗುಡ್ಡೆಮನೆ ಅಪ್ಪಯ್ಯ – ಚೆಟ್ಟಿ ಕರ್ತು ಕುಡಿಯರ್ ಸೆರೆಸಿಕ್ಕಿದೊ

ನಿರೂಪಕ : ಚೆಟ್ಟಿ ಕರ್ತುಕುಡಿಯರ ಕಂಪ್ನಿ ಸರ್ಕಾರ ಕರಿನೀರಿನ ಶಿಕ್ಷೆಗೆ ಗುರಿಮಾಡಿ ಸಿಂಗಾಪುರಕ್ಕೆ ಗಡಿಪಾರ್ ಮಾಡ್ತ್ –ಕೆಲವಕ್ಕೆ ಜೀವಾವಧಿ ಶಿಕ್ಷೆ ಆತ್

ನಿರೂಪಕಿ : ಮಡಿಕೇರಿಯ ಕುತ್ತಮೊಟ್ಟೆಲಿ ಗುಡ್ಡೆಮನೆ ಅಪ್ಪಯನ ಪಾಶಿಗೆ ಹಾಕಿದೊ

ನಿರೂಪಕ : ಮಂಗ್ಳೂರಿನ ಬಿಕರ್ಣಕಟ್ಟೆಲಿ ಕೆದಂಬಾಡಿರಾಮ – ಪುಟ್ಟಬಸಪ್ಪ ಲಕ್ಷ್ಮಪ್ಪರಸರ ಗಲ್ಲಿಗೇರಿಸಿದೊ

ನಿರೂಪಕಿ : ಹೀಂಗೆ ಕಲ್ಯಾಣ ದಂಡ್ ಖಾಲಿಯಾತ್ ಕಲ್ಯಾಣರಾಜ್ಯ ಕನಸಾತ್ ಕಲ್ಯಾಣ ಕ್ರಾಂತಿಯ ನಮ್ಮ ಹಿರಿಯರ್ ಗೆದ್ದ್ ಸೋತೊ

ನಿರೂಪಕ : ಸೋತು ಗೆದ್ದೊ ಕಂಪ್ನಿ ಸರ್ಕಾರದ ಇದಿರ್ ಮೊದಲ ಸೊತಂತ್ರ ಹೋರಾಟ ಮಾಡ್‌ದ ಅಮರ ಕಲ್ಯಾಣಕ್ರಾಂತಿಯ ದಾಖಲೆ ಮಾಡ್ದೊ

ನಿರೂಪಕಿ : ಇಂದ್ ಕೂಡಾ ಅಮರಸೀಮೆಯ ಅವ್ವಂದಿರ ಈ ಹಾಡಿನ ತೊಟ್ಟಿಲ್ ದಿನಾ ತೂಗಿದೆ

ನಿರೂಪಕ : ಅಮರಸೀಮೆಯ ಜೋ ಜೋ ಅಮರ ಕಲ್ಯಾಣ ಕ್ರಾಂತಿಯ ಗೇನ ತಂದದೆ (ಮೇಳಲಿ ಹಾಡ್ ಜೋ ಜೋ)

# ನೆನ್ಪಾದೆ ನಂಗೆ ಒಂದೊಂದೆ...

**ಯೋಗೀಶ ಹೊಸೊಳಿಕೆ**

ಅವ್ವ ನೀವ್ ಅಂದ್ ಹೇಳುತ್ತಿದ್ದರಿ
ಯಾರ್ದೋ ಮಾಯಿನ ಮರಕ್ಕೆ
ಕಲ್ ಹೊಡಕೆ ಹೋದ ನಮ್ಮ ಕರ್ದ್
ಓ.. ಮಕ್ಕಳೇ
ಹೊಡೆಬೊಡ್ಡಿ ಲಾಗ ಮಾಡುಬೋಡಿ ರಗಳೆ
ರಜೆ ಸಿಕ್ಕರೆ ಸಾಕ್ ಈ ಮಕ್ಕಳ
ಆಳ್ಬುದು ಹೇಂಗೆ?
ನಮ್ಮ ಕಾಲಲ್ಲಿ ಮಕ್ಕ
ಶಾಲೆ ಮೆಟ್ಟಕಲ್ ಹತ್ತೊವೇ ಇಲ್ಲೆಟ್ಟು
ಎಲ್ಲ್‌ಯಾರು ಹತ್ತಿರೂ ಒಂದುನೇ – ಎರ್ಡ್‌ನೇ
ಅಪ್ಪಕನ ಅಕ್ಕನ ಕೂಸುನ ನೋಡಿಕಂಕೆ
ಅಣ್ಣನ ಕೂಸುನ ನೋಡಿಕೆ ಮನೇಲಿ ನಿಲ್ಸುವೆ
ಇನ್ನ್ ಕೆಲವು – ಈಗ ತಿರ್ಗವ ಮಕ್ಕ
ಪಂಡ್‌ಲಿ ಅಯ್ಯಕ್ಕಳ ಒಟ್ಟಿಗೆ ನೇಜಿ ನೇಡಿಕೆ
ಕೆಯಿ ಕೊಯ್ಯೊಕೆ ಗದ್ದೆಗೆ ಹೊತ್ತಿದ್ದೋ

ಆದರೆ ಈಗ ಅವ್ವ ...
ಕಾಲನೇ ಕೆಟ್ಟು ಹೊಗುಟ್ಟು
ನಮ್ಮ ಮಕ್ಕಳ ಅವಸ್ಥೆನ ನೋಡಿ
ಕುದ್ದುಕಣ್ ಆಲ್ಸ್‌ಕನ
ನೆನ್ಪಾದೆ ನಂಗೆ ಒಂದೊಂದೆ ...
ನಾವು ಅರ್ಧಂಬರ್ಧ ಕಲ್ತ್ತರು

ನಮ್ಮ ಒಬ್ಬನೇ ಮಂಜ ಹೆಚ್ಚಿಗೆ ಕಲೆಕ್ಕುತ್ತಾ
ದೂರದ ಪೇಟೆಲ್ಲಿ ಲಾಯಿಕ್ಕೂನ ಶಾಲೆಗೆ ಹಾಕ್ಕಿರೆ
ಮನೆ ಕಡೆಗ್ಯಾನನೇ ಇಲ್ಲೆ.
ಈ ವರ್ಷಕ್ಕೆ ಸಾಲೆ ಮಗ್ದದೆ! ಇನ್ನಾರು
ನಿನ್ನ ಅಪ್ಪ ಅಮ್ಮನ ನೋಡಿಕಣ್
ಇದ್ದ ಜಾಗೆನ ಕೃಷಿ ಮಾಡಿಕ್ಕೆ ಬಾದುಲೇನಾ?
ಎಂತಕ್ಕೆ ಬಾದು. ಇಲ್ಲಿ ಖಚಿಟಿಂ ನ್ನು ಸಿಕ್ಕುದುಲೆ
Picture ನೋಡಿಕೆ ಟಾಕಿಸ್ ಹಕ್ಕಲೆ ಇಲ್ಲೆ
ಕಾಡ್ ಗುಡ್ಡೆಗೆ ನಾಯಿ ಗೈಂದಗೆ ಗೈಯಕ್ಕೆ ನಾ ಬಾದುಲೆ
ನಾ ಇಲ್ಲೆ compe ನಿಗೆ ಕೆಲ್ಸಕ್ಕೆ ಸೇರ್ನ್
ಬೇಕಾರು ನೀವುನು ಜಾಗೆ ಮಾರಿ ಇತ್ತ ಬನ್ನಿ

ನನ್ನ ಮಂಜನ ಈ ಮಾತ್‌ನ ಕೇಳಿ
ಬಿಳಿ ತಲೆಲ್ಲಿ ಕುದ್ದಕನ್ ಅಲ್ಸ್‌ಕನ
ಸತ್ತು ಸೊರ್‌ಗ್ಗಲ್ಲಿ ಇರುವ ಅವ್ವ
ಹಲ್ಲು ಇಲ್ಲದ ಬಾಯಲ್ಲಿ ಹೇಳ್ದ್
ಆ ಮಾತುಗ..
ನೆನ್ಪಾದೆ ನಂಗೆ ಒಂದೊಂದೆ
ಅಂದ್ ಹುಣ್ಣಿಮೆ ಇರ್ಲ್

ಕೊಮ್ಮುನ ಸೋಗೆನ ಮಾಡ್
ಮನೆನ ಎದುರು ಗೋಡೆಲಿ
ಅರ್ಧ ಅರ್ಧ ಕಮ್ಮುನ ತಟ್ಟೆನ ಕಿಡ್ಕಡಗೆ
ಸಮತಟ್ಟಾದ ಜಾಗೆಲ್ಲಿ ಕೆಂಪಣ್ಣನ ಮನೆ
ಮನೆನ ಸುತ್ತೊಳು ದೊಡ್ಡ ದೊಡ್ಡ ಮರಗ
ಅಂದ್ ಹುಣ್ಣಮೆ ಇರ್ಲ್

ತಿಂಗೊಳು ಬೆಳಕ್ ಮರದ ಸೆರೆಲಿ ಬಂದ್
ಮನೆನ ಮೇಲೆಲ್ಲಾ ತುಂಬಿತ್
ಆರು ಜನ ತುಂಬಿದ ಕೆಂಪಣ್ಣನ ಸಂಸಾರ
ಒಂದು ಬೊಗ್ಗಿ ನಾಯಿ
ಎರಡು ಕಂಟ ಕೊತ್ತಿ, ಮತ್ತೆ

ಇಪ್ಪತ್ತ್ ಮಕ್ಕಳ ಹೆತ್ತ ಹೇಂಟೆನ ಬುಟ್ಟು
ಅಂದ್ ಹುಣ್ಣಮೆ ಇರ್ಲ್

ಕೆಂಪಣ್ಣನ ಹೆಣ್ಣ್‌ನ ಕುಟುಂಬಲ್ಲಿ ಮೊದುವೆ
ಇವರ ನಾಲ್ಕ್ ಜನ ಹೆಣ್ ಮಕ್ಕ ಅಲ್ಲಿ ಹಾಜರ್
ಮನೇಲಿ ಅಜ್ಜ ಅಜ್ಜಿ ಉಳ್‌ದವರ ಬುಟ್ಟು
ಕತ್ತಲೆ ಹೋಗಿ ಬೊಳ್ಪು ಆಕೆ ಆತ್
ಕಾಗಡೆ ಮನೆ ಬೆಳ್ಳೆ ಹೂಂಜನ ಕೂಂಗು ಕೇಳ್ದ್
ಹಕ್ಕಿಗಳ ಮರ್ಡ್ಡಟ ಇವರ ಕಿಡಿಕೆಲಿ
ಒಲಿ ಮೊದ್ರಿಲಿ ಮಲ್ಲಗಿದವುಕೆ ಕೇಳ್ದ್
ಅಂದ್ ಹುಣ್ಣಿಮೆ ಇರ್ಲ್

ಆಗಾಲೇ ಕೆಂಪಣ್ಣಗೆ ಧೈರ್ಯ ಬಾತ್
ಓಯ್.... ಎದ್ದ್‌ರ್ಯಾ
ಅತ್ತ ತಿರ್‌ಗಿ ಮಲ್‌ಗಿದ್ದ ಚೋಮಕ್ಕ
ಇದ್ದ ದೇವ್ರುಗಳ ಹೆಸರ್ ಹೇಳಿ ಎದ್ದ್ ಕುದುಕಣ್
ಹರ್‌ಂಡಿದ್ದ ನಾಲ್ಕ್ ಕುದೋಲ್‌ನ ಕಟ್ಟಿಕಣ್
ಇರ್ಲ್ ಕನ್ಸಲ್ಲಿ ಯಾರೋ ಬಂದಾಗೆ ಆತ್‌ಯಾ?
ಅಂದ್ ಹುಣ್ಣಮೆ ಇರ್ಲ್

ಈ ಮಾತ್ ಕೆಳ್ದ ಕೆಂಪಣ್ಣ ಹೇಳುವೆ! ನಂಗು
ಹಂಗೇ ಕನ್ಸ್ ಕಟ್ಟಿ ಕಣ್ಣಿಗೆ ಕಣ್ಣ್ ಮುಚ್ಚಿತ್ತಲೆ
ಹಂಗಾರೆ ನೀವು ಯಾಕೆ ಹೇಳತ್ತ್‌ಲೆಯಾ?
ನಿಂಗೆ ಹೇಳಿ ನಿಂಗೂ ಯಾಕೆ ನಿದ್ದೆ ಹಾಳ್ ಮಾಡ್ದುತ
ಅಂತೂ ಇಬ್ಬರಿಗೂ ನಿದ್ದೆ ಇಲ್ಲೆ ಬುಡು
ಅದ್ ಯಾಲ್ಲಿ ಮಾರಾಯ್ತೀ ನೀ ಬೇಗ ಚಾಯ ಮಾಡ್
ಭಟ್ರಲಿಗೆ ಬೇಗ ಅಡ್ಕೆ ಚೋಲ್ಲಿಕ್ಕೆ ಹೋಕು
ಅಂದ್ ಹುಣ್ಣಮೆ ಇರ್ಲ್

ಚೋಮಕ್ಕ ಓಲೆಂದ ಮೊಸಿನ ಬಾಯಿಗೆ ಹಾಕಿಕಣ್
ನೀರಡಿ ಕೊಟೆಗೆ ಹಕ್ಕಲೆ ಹೋದವೆ
ಅಲ್ಲಿ ಮಂಡೆ ಇಲ್ಲೆ ಏಯ್... ಇತ್ತ ಬನ್ನಿಯಾ ಕರ್‌ದವೆ

ಕೆಂಪಣ್ಣ ಅಂಗಳ ಕರೇಲಿ ತುಂಡು
ಬೀಡಿನ ಬಾಯಿಲಿ ಕಚ್ಚಿಕಂಣ್ದ್
ಉಚ್ಚೆ ಹೊಯಕೆ ಕುದ್ದುಳೊ
ಬೀಡಿ ಇಟ್ಟ್ ಚೆಡ್ಡಿನ ಬೊಳ್ಳಿ ಕಟ್ಟಿ ಕಂಣ್ದ್
ಓಡಿ ಬಂದವೆ! ಅಲ್ಲಿ ಇಲ್ಲಿ ಹುಡ್ಕುವೆ
ಅಂದ್ ಹುಣ್ಣಮೆ ಇರ್ಲ್

ಮಂಡೆಗೆ ಮುಚ್ಚಿದ ಹಲಗೆ ಅಲ್ಲಿ ಉಟ್ಟು
ಯಾರೊ ಹೊತ್ತೊಳೊಯಾ ಕೆಂಪಣ್ಣ ಹೇಳ್‌ವೆ
ಆಗ ಚೋಮಕ್ಕ ಹಡಬೆ ನಾಯಿ ಸತ್ತೂತ
ಅದರ ಹುಲಿ ಹೊರಿಕೆತ ಮನ್ಸ್‌ಲಿ ಗೊಡ್ಸಿಕಂಡವೆ
ಅದ್ ಎಲ್ಲಿಯಾರ್ ತಿರ್ಗಿಕ್ಕೆ ಹೋಗಿರ್ದುಯಾ
ತೇಳಿ ಹೇಳ್ದ ಕೆಂಪಣ್ಣ ಹೇಳುವೆ...
ನಿನ್ನೆದ್ ಕನ್ಸ್‌ಲ್ಲ ನನ್ಸಾಯಾ

ಅಂದ್ ಹುಣ್ಣಮೆ ಇರ್ಲ್
ಆ ಕಳ್ಳಂಗಳ ಜೋಡು ಶಬ್ದನು ನಂಗೆ ಕೇಳ್ತು
ಸುಟ್ಟೆ ಹೋಗಲಿ ನೀ ಚಾಯ ಮಾಡ್
ಹಿಂದೆನ ಸಾಲದೊಟ್ಟಿಗೆ ಭಟ್ರು
ಮಂಡೆಗೂ ಸಾಲ ಕೊಡಿಕಿಲೆಯಾ?
ಅಂದ್ ಹುಣ್ಣಿಮೆ ಇರ್ಲೆ

# ಹಳೇ ನೋಟ್

ಕೊಕ್ಕಲೇ ಮಾಲಿನಿ ಮುತ್ತಪ್ಪ

ಹಳೇ ಹಳೇ ನೋಟ್
ನಾವುಗಳ ಆರೋಗ್ಯಕೆ ತಂದದೆ ಏಟ್
ಹಳೇ ನೋಟ್‌ತ ಹೇಳ್‌ದು ಬರಿ ನೋಟಲ್ಲ
ಅದ ಲೆಕ್ಕಾಚಾರದ ವಿನಿಮಯದ ನೋಟ್

ಮೀನ್ ಮಾಸದಂಗಡಿ
ತರಕಾರಿ ಅಂಗಡಿ, ರಾಸಾಯನಿಕ ಅಂಗಡಿ
ಹತ್ತ್ ಕಡೆಂದ ನಾವುಗಳ್‌ನ್ನ
ಬಂದ್ ಸೇರ್‌ವ ಕರೆನ್ಸಿ ನೋಟ್

ಈ ನೋಟ್ ಜೀವಕ್ಕೆ
ಹಾನಿ ಮಾಡ್‌ವ ಬ್ಯಾಕ್ಟೀರಿಯಾ
ಪಂಗಸ್ ಪರೋಪ ಹುಳಗ
ಕಂಡ್ ಬಂದ ಹಳೇ ಹಳೇ ನೋಟ್

ಅತಿಸಾರ, ಕ್ಷಯ, ಶ್ವಾಸಕೋಶ ಸೋಂಕ್
ವಾಂತಿ ಖಾಯಿಲೆಗ ಒಂದಾದಂಗೆ ನಾವುಗಳ
ಆರೋಗ್ಯಕ್ಕೆ ತಂದದೆ ಏಟ್
ಎಚ್ಚರ, ಎಚ್ಚರ ಹಳೆ, ಹಳೆ ನೋಟ್‌ಗ
ತಂದದೆ ನಾವುಗಳ ಆರೋಗ್ಯಕ್ಕೆ ಏಟ್



# ಹುತ್ತರಿ ಹಬ್ಬ

ಬೈಲೇರಾ ಭಾನು ಅಶೋಕ್

ಬಾತ್ ನಮ್ಮ ಕೊಡಗಿನ ಹುತ್ತರಿ
ಬನ್ನಿ ಆಚರಿಸೋಣಾ ಒಟ್ಟಾಗಿ ಸೇರಿ
ಅಟ್ಟ ಅಡಿಗಳ ಗುಡ್ಸೋಕು ಕರಿ
ಅಂಗಳ ನೆಲಗಳ ಸಾರ್ಸೋಕು ಸರಿ
ಎಲ್ಲಾವರ ಮನೇನೂ ಮದುವಣಗಿತ್ತಿ
ಗೋಡೆಗೆ ತರತರ ಬಣ್ಣನೂ ಮೆತ್ತಿ
ಕಟ್ಬೋಕು ದೊಡ್ಡ ದೊಡ್ಡ ಚೆಂಡು ಹೂ ಮಾಲೆ
ಸೇರ್ಸೊಕು ಮಧ್ಯೆ ಮಧ್ಯೆ ಮಾವಿನ ಎಲೆ
ಹುತ್ತರಿ ಗೆಣ್ಸ್ ಎಳ್ಳುದು ಜೋರ್
ಐದು ಬಗೆಯ ರುಚಿ ರುಚಿ ಸಾರ್
ಮಕ್ಕಳಿಗೆ ಬೇಕು ಢಂ ಢಂ ಪಟಾಕಿ
ಅವುಕೆ ಮೊದ್‌ಲೆ ತಿಳ್ಸಿ ಹೆಳೋಕು ಇದರಿಂದಾಗುವ ಕಿತಾಪತಿ
ಗದ್ದೆಲಿ ತೂಗಿ ನಿತ್ತುಟ್ಟು ಭತ್ತದ ತೆನೆಗ
ಇದನ್ನೆ ಸಾರಿ ಹೆಳುವೇ ತರತರ ಹಕ್ಕಿಗ
ನೆರೆ ಕಟ್ಟುದು ಕದಿರು ಕೊಯ್ಯುದು
ಪೋಲಿ ಪೋಲಿಯೇ ಬಾ ಕರಿಯದು
ನೆಲ್ಲಕಿ ಬಾಡೆಲೀ ಎಲ್ಲಾವು ಸೇರ್ದು
ಹಬ್ಬದೂಟನ ಕುಸಿಲೇ ಮಾಡ್ದು
ಎಲ್ಲಾ ಮನೇಲೂ ವಿಶೇಷ ಅಡಿಕೆಟ್ಟ್ ತಂಬಿಟ್ಟ್
ತಿಂದ್ ಹೊಡ್ದವೆ ಮಂದಲಿ ಹುತ್ತರಿ ಕೋಲಾಟ್
ಆಗನೇ ಶೂರು ಆದೆ ಇಲ್ಲಿ ಮಂಜಿನ ಬೆಡಗ್
ಅದಿಕ್ಕೆ ಹೆಸರ್‌ವಾಸಿ ಈ ನಮ್ಮ ಕೊಡಗ್

# ಸೀತೆನ ಒಳಮನ್ಸ್

ಲೀಲಾ ದಯಾನಂದ, ಮಡಿಕೇರಿ

ಅವಳಿ ಮಕ್ಕ ಅವ್, ತಂದೊ ಹೊರಳಿ ಗರ್ಭಲಿ ಪುಳಕ
ಯಾವಂದೋ ಮಾತ್ ಮಾಡ್ತ್ ಸಂಸಾರನ ನರಕ
ಕುಸಿಗಳ್‌ಗೆಲೂ ಹಿಂಡಿದೆ ಬಸ್‌ರಿ ಮನ್ಸ್‌ನ
ಹೇ ರಾಮ, ಯಾಗೋಳು ನಂಗೆ ನಿನ್ನದೇ ಗ್ಯಾನ....

ಹೊರ್ಪ ಹದಿನಾಲ್ಕ್ ವರ್ಸ ನೀ ವನವಾಸಕೆ
ಅತ್ತಿತ್ತ ನೋಡ್‌ತ್‌ಲೆ ನಾ ಬಂದೆ ನಿನ್ನ ಹತ್ರಕೆ
ನಂಗ್ಯಾಕೆ ಅರಮನೆ ನೀ ಇತ್ತ್‌ಲರೆ ಹೇಳ್
ನಿನ್ನೆದೆನೇ ಅಂತಃಪುರ ನಂಗೆ ನೆಮ್ಮದಿ ಬಾಳ್....

ಯಾಕೆ ಬಾತ್ ನಂಗೆ ಆ ಸಾರ್‌ಗದಾ ಆಸೆ
ಮರ್ತ್ ಬುಟ್ಟೆ ನಾ ಲಕ್ಷ್ಮಣಂಗೆ ಕೊಟ್ಟ ಭಾಷೆ
ಅಣ್ಣಯ್ಯನ ಉರ್‌ಸಿತ್ ತಂಗೆ ಶೂರ್ಪನಖಿ ಗೋಳ್
ಮುಂದಾತ್ ರಾಮಾಯಣ, ವಾಲ್ಮೀಕಿನ ಕೇಳ್......

ಅಶೋಕವನಲಿ ಮಾಡ್ತಿದ್ದೆ ಶ್ರೀರಾಮನ ಗ್ಯಾನ
ಕನ್ನಾತ್ ವ್ಯರ್ಥ– ಸೋತತ್ ಆ ರಾವಣ
ರಾಘವನ ರಾಜ್ಯಲಿ ವಿಧಿಯಾಟ ನೋಡ್
ಕೈ ಹಿಡ್ದ ಹೆಣ್ಣ್‌ಗೇ ಅನ್ಯಾಯ, ಇದ್ಯಾವ ಕೇಡ್?...

ಕಿಚ್ಚೊಳಗೆ ಬಿದ್ದರೂ ಬೆಂದತ್‌ಲೆ ಈ ಸೀತೆ ಜೀವ
ಆದರೆ ನಿಂಗೂ ಗೊತ್ತಿರ್‌ಲಿ ಸುಟ್ಟೋತ್ ಪ್ರೀತಿ ಭಾವ
ಮಡಿವಾಳನ ಹರ್‌ಕ್ ಮಾತ್ ನಿಂಗಾತ್ ವೇದ ವಾಕ್ಯ
ಬಸ್‌ರಿ ಹೆಣ್ಣ್‌ನ ಕಾಡ್‌ಲಿ ಬುಟ್ಟು ಮಾಡ್ದ ನೀ ಪರಿಹಾಸ್ಯ......

ನೂರ್ ಜನರ್ ಮನ್ಸ್‌ಲಿ ಹುಟ್ಟಿರ್‌ದು ಸಂಶಯ ಪಿಶಾಚಿ
ನನ್ನಾಣೆ ರಾಮ, ನಿಂಗೂ ಗೊತ್ತುಟ್ಟ್ ನಾ ನಿರ್ದೋಸಿ
ಲೋಕ ರೂಢಿಲಿ ಹೇಳ್ವೆ ಎಲ್ಲಾ ಹೆಣ್ಣ್ ಸಹನೆಲಿ ಕಡ್‌ಲ್
ಅಯ್ಯೋ ಸಹಸಿಕಾಲೆ, ಸೇರಿಕಣೆ ನಾ ಭೂತಾಯಿ ಮಡ್‌ಲ್

# ಕಾಲ ಕೆಟ್ಟ್ ಹೋಗುಟ್ಟು ...

ಬಾರಿಕೆ ಶೈಲಜ ದಿನೇಶ್, ತಾವೂರು

ಅಪ್ಪ ಅವ್ವನ ಮಾತಾಡ್ಸಿಕೆ
ಮಕ್ಕಳಿಗೆ ಈಗೀಗ ಪುರ್ಸೊತ್ತೇ ಇಲ್ಲೆ
ನೋಡಿಕಂಬಕೆ ಆಳ್ ಹೊಟ್ಟೆ ತುಂಬಾ ಊಟ
ಎಲ್ಲಾ ಇದ್ದರೂ ನೆಮ್ಮದಿನೇ ಇಲ್ಲೆ ಅವ್ಕೆ

ಒಂಭತ್ತ್ ತಿಂಗ ಹೊಟ್ಟೆಲಿಸಿ ಸಾಂಕಿದ ಅವ್ವ
ಯಾರಿಗೂ ಮಾಡ್ತ್‌ಲೆ ಭೇದ ಭಾವ
ಒಟ್ಟಿಗೆ ಒಡಹುಟ್ಟಿದವೂ ಆಡಿ ಬೆಳ್ದೊ
ಬಾರಿ ಕುಸಿಲಿ ಅಂದ್ ಕಾಲನೂ ಕಳ್ದೊ

ಮಕ್ಕ ದೊಡ್ಡ ಉದ್ಯೋಗಸ್ಥರ್ ಆಕೂಂತ್ಹೇಳಿ
ಓದಿಸಿದೊ ಹೆತ್ತವು ಬಾರಿ ಶ್ರಮಲಿ
ಸಾಂಕಿಕೆ ಕಷ್ಟ ಆದೇಂತ್ಹೇಳಿ ಅವರ
ಬುಟ್ಟ್ ಬಂದವೆ ಈಗ ವೃದ್ಧಾಶ್ರಮಲಿ

ಮಾತೇ ಮರ್ತ್ ಹೋದವರ ಹಂಗೆ
ಮನೆಲಿ ಕುದ್ದ್‌ಕಂಡ್ ಮಾಡುವೆ ಚಿಂತೆ
ವ್ಯವಹಾರನೋ ಅವ್ಯವಹಾರನೋ ಎಂತಾಂತ ಗೊತ್ತ್‌ಲೆ
ಕೊಂಬರೆಲಿ ಕುದ್ದ್ ಲೆಕ್ಕ ಹಾಕುವೆ ಮುಡ್ಡ್‌ನ ಕಂತೆ

ಭೂಮಿಲಿ ಈಗ ಕಾಲಕೆಟ್ಟ್ ಹೋಗುಟ್ಟು
ದೃಷ್ಟಿ ಇದ್ದರೂ ಕಣ್ಣ್ ಕಾಣದಂಗಾಗುಟ್ಟು
ಬೊದ್ಕುವ ದಾರಿ ಈಗ ಮರ್ತೇ ಹೋಗುಟ್ಟು
ಪ್ರೀತಿ ವಿಶ್ವಾಸನೇ ಇಲ್ಲದಂಗೆ ಆಗುಟ್ಟು.......

# ಅರೆಭಾಷಿಕ ಲಾವಣಿ

(ಸಂಗ್ರಹ) ಡಾ. ಪೂವಪ್ಪ ಕಣಿಯೂರು

ನೀರ್‌ಲ್ಲೇ ಹುಟ್ಟಿ ನೀರ್‌ಲ್ಲೇ ಬೆಳ್ದರೂ ತಾವರೆಲೆ ನೀರ್ಮೇಲೆ ಪಾಂಬಿದೆ
ಕೆಸ್‌ರ್‌ಲ್ಲೇ ಹುಟ್ಟಿ ಕೆಸ್‌ರ್‌ಲ್ಲೇ ಬೆಳ್ದರೂ ತಾವರೆ ಹೂವುಲೀ ಕೆಸ್‌ರ್ ಇರ್ದುಲೆ
ಸಂಸಾರಲೇ ಹುಟ್ಟಿ ಸಂಸಾರ್‌ಲೇ ಬೆಳ್ದರೂ ಸಂಸಾರದ ಮೋಹಲೇ ಮುಳುಂಗುಬಡೀ
ಮಾವಂಗೂ– ಅಳಿಯಂಗೂ ನೆಂಟತನ ಇದ್ದರೂ ನ್ಯಾಯಕ್ಕೆ ನೆಂಟತನ ಏನಿಲ್ಲೇ
ನೆಂಟರು ಆಗಿಯೇ ಇದ್ದರೂ ಕೆಲವರ ನಂಟ್ ಹಿಡ್ಸಿಕಿಲೆ
ಎದ್ರ್‌ಂದ ಹೋಗಿ ಹಿಂದೆಂದ ದೂರುವ ಮೋಸದ ಮ್ಯೊಂಸರೆಲ್ಲ ಆಕಿಲ್ಲೆ
ಒಪ್ಪೊತ್ ಉಂಡ್ ಸೊಪ್ಪುನೇ ತಿಂದರ್ ತಕ್‌ರಾರ್ ಮ್ಯೊಂಸರೆಲ್ಲ ಆಕಿಲ್ಲೆ
ಕೊತ್ತಿನ ತಂದ್ ಉಪ್ರಿಕೆಲೆ ಕುದ್ರಿಸಿರ್ ಕೊಂಬು ಬಾಕಿಲ್ಲೆ
ಮೂರ್ಕತ್ತೆ ವರ್ಸ ದಾಟಿರೊ ಮೂರ್ಕಾನಿನ ಬುದ್ದಿ ಬುಡಿಕಿಲೆ
ಚಿಲ್ಲ್‌ರೆ ಕೊಡ್ಸಿ ರುಪ್ಯಾ ಮೊಡ್ಗಿಗ್ರೆ ರುಪ್ಯಾ ಜನ ಏನ್ ಅವು ಆಕಿಲೆ
ಹಿಂಡಿನ ಕೊಡದೆ ಕೊಡ್ದುಲೆ ಹಾಲ್‌ಂತ ಎಮ್ಮೆನ ಬ್ಯೊದ್ ಫಲ ಇಲ್ಲೆ
ಹೇಂಟೆನ ಹಿಡ್ದ್ ಜುಟ್ಟುನ ಕಟ್ಟಿ ಕೂಗೂಂತ ಹೇಳೀರೆ ಅದ್ ಕೂಂಗಿಕಿಲೆ
ನೋಡಕೆ ನಾಗ ಎಷ್ಟೊಂದು ಪೊರ್ಲು, ಬಾಯಿಲಿ ಇಸ ಹಲ್ಲ್ ಕಾಂಬೊಕಿಲೆ
ನೋಡಿಕೆ ದೊಡ್ಡದ್ ಆದರೂ ಹೆಬ್ಬಾವಿಗೆ ವಿಷ ಇಲ್ಲೆ
ಮಾತ್‌ಲಿ ಕೆಲೊವು ಜನ ಎಷ್ಟೊಂದು ಪೊರ್ಲು ಅಂಥವರ ಮೋಸ ಗೊತ್ತಾಕಿಲ್ಲೆ
ಉಪ್ಪ್‌ನ ಅಳ್ಯೆಕ್ ತುಪ್ಪನೂ ಅಳ್ಯೆಕ್ ಮ್ಯೊಂಸನ ಅಳ್ಯೆ ಕಾಕಿಲ್ಲೆ
ಕಾಸ್‌ನ ಬಿಚ್ಚಿ ಅಳ್ಯೆಕ್ ತೇಳಿರೆ ಮಾರಾಟಕೆಲ್ಲು ಆಳ್ತೆ ಸಿಕ್ಕಿಕಿಲ್ಲೆ
ಹಿತ್ತಾಳೆ ಪಾತ್ರೆನ ಎಷ್ಟೊತ್ತು ಉಜ್ಜಿರೊ ಅದ್ ಎನ್ ಹೊಳೆಕಿಲೆ
ಹೊಲೆಯನೆ ಆಗಿ ಹುಟ್ಟಿರೂ ಸತ್ಯವಂತನಕ್ಕಲೆ ಹೊಲೆತನ ನಿಲ್ಲಕಿಲ್ಲೆ
ಸುಳ್ಳು ಮೋಸನ ಮಾಡಿರೆ ಅಂವ ಹೊಲ್ಯಗಡ
ಅತ್ತಂದ ಇತ್ತಂದ ಚಾಡೀಲೆ ಇರೋವು ನಿಗಂಟಿಗೇನೊ ನಿಲ್ಲಕಿಲೆ
ಮೋಸಕೆ ದಾರಿ ತೋರ್ಸ್‌ಬಡಿ ಗುಣಕೆ ಮಚ್ಚರ ಮಾಡ್‌ಬೆಡಿ
ಸತ್ಯದೊಟ್ಟಿಗೆ ಸಿಟ್ಟ್ ಮಾಡ್ಬೆಡೀ ಸತ್ಯಯಾಗೋಳು ಬುಡ್‌ಬಡಿ
ಎಲ್ಲವರ ಕೆಲ್ಸನ ಕೂಡಾಡಿ ಮಾಡದೆ ದೂರಿಕಂಡೆ ತಿರ್ಗಿರೆ ಫಲ ಇಲ್ಲೆ
ಎಲ್ಲರ ಕೆಲ್ಸನ ಕೂಡ್ ಕೊಂಡ್ ಮಾಡಿರೆ ಅದರಿಂದ ಬೇರೆ ಸುಖಇಲ್ಲೆ
ನಂಬಿರೆ ನಂಬೋಕು ಕುಲದೇವತೆ ನಮ್ಮ ಒಣಗೂರು ಸಬ್ಬಮ್ಮನ
ನಂಬಿಕೆ ನಂಬೋಕು ನಮ್ಮ ಕುಲದೇವತೆ ಕೆಂಚಮ್ಮನ





# ಎಳ್ಳ್– ಮೆಂತೆ ಅಡ್ಗೆ

ಎಂ.ಜಿ. ಕಾವೇರಮ್ಮ

ನಾವು ಅರೆಬಾಸೆ ಜನಂಗ, ನಮ್ಮ ಹೆಣ್ಣ್ ಮಕ್ಕ ಪ್ರಾಯಕ್ಕೆ ಬಾಕಾಕನ, ಅವು ಪುಸ್ಟಿಯಾಗಿ ಬೆಳ್ಯಕೆ ಈ ಎಳ್ಳ್–ಮೆಂತೆ ಅಡ್ಗೆನ ಮಾಡಿ ಇಸಿಕಂಡ್ ಎರ್ಡ್–ಮೂರ್ ತಿಂಗ ತಿನ್ನುವೆ. ಪೆದ್ದೋಳ್ತಿಗ ಸಾ ಹಳ್ಳಿ ಮೊದ್ದ್ ಮಾಡೊವು (ಓಮ– ಮೆಣ್ಸ್ ತಿಂಬೊವು) ಕೂಸಿಗೆ ಎರ್ಡ್ ತಿಂಗ ಕಳ್ಯಕಾಕನ, ಅಯ್ಯೆಗೆ ಮೈ ಬಾಕೆ, ದಾತ್–ಪುಸ್ಟಿ ಹೆಚ್ಚಿಕೆ, ಎದೆ ಹಾಲ್ ತುಂಬಿಕೆ ಈ ಅಡ್ಗೆನ ಮಾಡಿ ಇಸಿಕಂಡ್ ದಿನಾ ಬೊಳ್ಪುಗೆ ಹಸಿ ಹೊಟ್ಟೆಗೆ ಎರ್ಡ್– ಮೂರ್ ಸವುಂಟು ತಿಂದವೆ.

**ಬೇಕಾದ ಸಮಾನ್‌ಗ :** ನೀರ್‌ಲಿ ಗಾಳ್ಸ, ತೊಳ್ದ್ ಒಣ್ಗಿಸಿದ ಕಪ್ಪು ಎಳ್ಳ್ –1 ಪಾವು, ತೊಳ್ದ್ ಒಣ್ಗಿಸಿದ ಮೆಂತೆ – 1/2 ಪಾವು, ದನದ ತುಪ್ಪ – 1 ಕೊಂಡೆ, ದೊಡ್ಡ ತೆಂಗಿನಕಾಯಿ–2, ಐದಾರ್ ಚಾಳ ಬೆಲ್ಲದ ಹೊಡಿ–2ಪಾವು

**ಮಾಡುವ ಕ್ರಮ:** ಸುರುಗೆ ಮಿಕ್ಸಿಗೆ ಮೆಂತೆನ ಹಾಕಿ ಹೊಡಿ ಮಾಡಿಸಿ. ಅದರ ಒಂದು ತಪಲೆಗೆ ಹಾಕಿಸಿ. ಅದೇ ಮಿಕ್ಸಿಲಿ ಎಳ್ಳ್‌ನ ಹಾಕಿ ಹೊಡಿ ಮಾಡಿಸಿ. ಅದರನೂ ಮೆಂತೆ ಹೊಡಿ ಇದ್ದ ತಪಲೆಗೆ ಹಾಕಿಸಿ. ಎರ್ಡ್ ಕಾಯೆನ ಹೆರ್ಕಂಡ್, ಆ ಕಾಯೆ ಹೂನ ಎರ್ಡ್ ಕೈ ಇದ್ದ ಬಾಣಲೆಗೆ ಹಾಕಂಡ್ ಅದಕ್ಕೆ ಒಂದು ತುಂಡು ಒಣ್ಗಿದ ಅರ್ಸಿಣ ಕೊಂಬುನ ಗುದ್ದಿ ಹಾಕಿ, ಎರ್ಡ್ ಗ್ಲಾಸ್ ನೀರ್ ಹಾಕಿ ಒಲೆ ಮೇಲೆ ಇಸಿನಿ. ಅದ್ ಬಿಸಿ ಆಗಿ ಒಂದೆರ್ಡ್ ಮುಗುಳಿ ಕೊದ್ಯಕೆ ಬಂದ ಕೂಡ್ಲೆ ಅದರ ಕೆಳಗೆ ಇಳ್ಸಿನಿ. ತಣ್ಣಂಗೆ ಆದ ಮೆಲೆ ಅದರ ಬೇಕಸ್ಟ್ ನೀರ್ ಹಾಕಿ ಮಿಕ್ಸಿಲಿ ಅರ್ಶ್ಯನಿ. ಅದರ ತೆಗ್ದ್ ಹಿಂಡಿ ಕಾಯೆ ಹಾಲ್ ತೆಗ್ಯನಿ. ಉಳ್ದ ಹಿಂಟೆಗೆ ಬೇಕಸ್ಟ್ ನೀರ್ ಹಾಕಿ ಇನ್ನೊಮ್ಮೆ ಮಿಕ್ಸಿಲಿ ಅರ್ದ್ ಹಾಲ್ ನ ತೆಗ್ಯೆನಿ. ಈ ಕಾಯೆ ಹಾಲ್ ನ ಅಡಿ ದಪ್ಪ ಇದ್ದ ಎರ್ಡ್ ಕೈ ಬಣಲೆಗೆ ಹಾಕಿ ಒಲೆ ಮೆಲೆ ಇಸಿನಿ. ಸಣ್ಣ ಉರಿಲಿ ಕೊದಿಸಿನಿ. ಸೆಡೆಲಿ ಆಗಾಗ ಮೊಗ್ಚಿಕಂಡ್ ಇರಿನಿ. ಅದ್ ಕೊದ್ದ್, ಕೊದ್ದ್ ನೀರ್ ಪಸೆ ಎಲ್ಲಾ ಆರಿ ಎಣ್ಣೆ ನೆಡ್ಯಕಾಕನ ಅದಕ್ಕೆ ಎಳ್ಳ್–ಮೆಂತೆ ಹೊಡಿ ಸೇರಿಸಿನಿ. ಸೆಡೆಲಿ ಮೊಗ್ಚಿಕಂಡೇ ಇರಿನಿ. ಅಡಿ ಹಿಡ್ಯಕೆ ಬೊತ್ತ್. ಅದ್ ಮಿತ್ರ ಆದ ಮೇಲೆ ಅದಕ್ಕೆ ಚಾಳಿ ಬೆಲ್ಲದ ಹೊಡಿ ಹಾಕಿ ಸಮಾ ಮೊಗ್ಚಿಕಂಡೇ ಇರಿನಿ. ದನದ ತುಪ್ಪ ಒಂದು ಕೊಂಡೆ ಅದ್ಕೆ ಹೊಯ್ಯೆನಿ.. ಅದರ ಮೊಗ್ಚಿ, ಮೊಗ್ಚಿ ಅದ್ ಒಳ್ಳೆ ಹಲ್ವದಂಗೆ ಆಕಾಕನ ಅದರ ಕೆಳಗೆ ಇಳ್ಸಿನಿ. ಈ ಎಳ್ಳ್–ಮೆಂತೆ ಅಡ್ಗೆ ತಿಂದ್ ನೋಡಿನಿ. ದಿನ ಕಳ್ದಾಂಗೆ ಇದರ ರುಚಿ ಹೆಚ್ಚಿದೆ. ಆರ್ ತಿಂಗ ಕಳ್ದರೂ ಇದ್ ಹಾಳಾದ್ಲೆ. ಬರ್ಣಿಲಿ ತುಂಬಿಸಿ ಇಸಿನಿ. ಚಾಳಿ ಬೆಲ್ಲ ರಕ್ತ ಶುದ್ಧಿಗೆ ಒಳ್ಳೆದ್ ಮಂಗ್ಳೂರ್ ಕಡೆ ಕರಾವಳಿಲಿ ಇದರ ಮಾಡಿ ಮಾರ್ರೆ. ಇದರ ಚಾಳಿ ಬೆಲ್ಲ ಕಳ್ಳ್‌ಂದ ಮಾಡ್ದು.




# ನಾಟಿ ವೈದ್ಯ

ಯೋಗೀಶ್ ಹೊಸೊಳಿಕೆ

**ರೋಗದ ಲಕ್ಷಣ:** ಜ್ವರ ಒಂದು ಕಾಯಿಲೆಯಲ್ಲ. ಬದಲಿಗೆ ದೇಹವನ್ನು ಕಾಡುತ್ತಿರುವ ಕಾಯಿಲೆಯೊಂದರ ಪರಿಣಾಮವಾಗಿ ಮೈ ಬಿಸಿಯೇರ ತೊಡಗುವುದು. ರೋಗವೊಂದು ಎರಗಿದಾಗ ದೇಹ ಒಡ್ಡುವ ಪ್ರತಿರೋಧಕ ಲಕ್ಷಣವೇ ಜ್ವರ. ಉದಾಹರಣೆ ದೇಹದ ಯಾವದಾದರೂ ಭಾಗದಲ್ಲಿ ತೀವ್ರವಾದ ಗಾಯವಾದಾಗ ಜ್ವರ ಬರುತ್ತದೆ. ಇಲ್ಲ ಗಾಯವಾಗಿರುವುದು ಕಾಯಿಲೆ ಎಂದಾದರೆ ಜ್ವರ ಅದರ ಪರಿಣಾಮ. ಮಳೆಯಲ್ಲಿ ತಲೆ ಮೈ ನೆನೆದರೆ ಜ್ವರ ಬರುತ್ತದೆ. ಜೊತೆಗೆ ನೆಗಡಿ, ಶೀತ ಕೂಡಾ ಬಾಧಿಸುತ್ತದೆ. ಅಜೀರ್ಣದಿಂದಲೂ ಜ್ವರ ಬರುತ್ತದೆ. ಹೀಗೆ ನಾನಾ ಕಾರಣದಿಂದಾಗಿ ಜ್ವರ ಬರುತ್ತದೆ. ಹಾಗಾಗಿ ಆಯಾಯ ಕಾಯಿಲೆಗನುಸಾರವಾಗಿ ಬೇರೆಯೇ ಔಷಧೋಪಚಾರಗಳಿದ್ದರೂ, ಇಲ್ಲಿ ಸಾಮಾನ್ಯ ಜ್ವರಕ್ಕೆ ಸರ್ವೇ ಸಾಮಾನ್ಯವಾದ ಔಷೋಧಪಚಾರ ಹೀಗಿದೆ;

**ಔಷಧ ಮೂಲ :** ಗುಡ್ಡದಲ್ಲಿ ದೊರೆಯುವ ಕಳೆಂಜಿ ಗಿಡದ ಚಿಗುರು ಸೊಪ್ಪು ಮತ್ತು ಕಿರಾತ ಕಡ್ಡಿ. ಇವೆರಡನ್ನು ಸಮ ಪ್ರಮಾಣದಲ್ಲಿ ಬೆರೆಸಿ ನೀರಿನಲ್ಲಿ ಕುದಿಸಿ ಕಷಾಯ ತಯಾರಿಸಬೇಕು. ಈ ಷಾಯವು ತೀರ ಕಹಿಯಾಗಿರುವುದರಿಂದ ಸ್ವಲ್ಪ ಓಲೆ ಬೆಲ್ಲ ಬೆರೆಸಿದರೆ ಒಳ್ಳೆಯದು ಬೆಲ್ಲವೂ ಒಂದು ಪೂರಕ ಅಂಶವಾಗಿಯೂ ಕೆಲಸ ಮಾಡಬಲ್ಲುದು. ಸಿದ್ಧ ಔಷಧವನ್ನು ದಿನಕ್ಕೆ ಮೂರು ಹೊತ್ತು ಕುಡಿಯಬೇಕು. ಕಷಾಯವು ನೀರಿಗಿಂತ ಸ್ವಲ್ಪ ಮಂದವಾಗಿದ್ದರೆ ದೊಡ್ಡವರಿಗೆ ಅರ್ಧ ಕೊಂಡೆಯಷ್ಟು ಮತ್ತು ಮಕ್ಕಳಿಗಾದರೆ ಅವರವರ ವಯೋಗಾತೆಕ್ಕನುಸಾರ ಪ್ರಮಾಣವನ್ನು ಕಡಿತಗೊಳಿಸಬೇಕು. ಸೇವಿಸಿದ ಸ್ವಲ್ಪ ಹೊತ್ತಿನಲ್ಲಿ ದೇಹವು ಬೆವರಲು ಆರಂಬಿಸಿದಲ್ಲಿ ಔಷಧಿಯ ಪರಿಣಾಮ ಬೀರಿದೆ ಎಂದುಯ ತಿಳಿದುಕೊಳ್ಳಬಹುದು.

**ಔಷಧ– ದೊಡ್ಡ ಪತ್ರ:** ದೊಡ್ಡ ಪತ್ರ ಸಾಮಾನ್ಯವಾಗಿ ಹಿತ್ತಲೊಳಗೆ ಮನೆ ಸುತ್ತ ನೆಟ್ಟು ಬೆಳೆಸುವ ಗಿಡ ಔಷಧಿಯ ಬಳಕೆಗಾಗಿಯೇ ಬೆಳೆಸಲ್ಪಡುತ್ತದೆ. ಒಂದ್ಯೆದಾರು ಎಲೆಗಳನ್ನು ಆಯ್ದು ತಂದು ಕೆಂಡದ ಮೇಲೆ ಬಾಡಿಸಿ ಅದನ್ನು ಜಜ್ಜಿ ರಸ ತೆಗೆಯಬೇಕು. ದೊಡ್ಡವರಿಗಾದರೆ ಎರಡು ಟೀ ಸ್ಪೂನ್ ರಸವನ್ನು ಆಹಾರದ ನಂತರ ದಿನಕ್ಕೆ ಮೂರು ಬಾರಿ ಸೇವಿಸಬೇಕು. ಸೇವಿಸಿದ 4–5 ಗಂಟೆಯೊಳಗೆ ಜ್ವರ ನಿಯಂತ್ರಣಕ್ಕೆ ಬರುತ್ತದೆ.

**ಔಷಧ– ಹಿಪ್ಪಲಿ ಮತ್ತು ಶುಂಠಿ:** ಇವೆರಡನ್ನು ಸಮ ಪ್ರಮಾಣದಲ್ಲಿ ಬೆರೆಸಿ ಕುಟ್ಟಿ ಪುಡಿ ಮಾಡಿ ಕಷಾಯ ತಯಾರಿಸಬೇಕು. ಎರಡೆರಡು ಟೀ ಚಮಚಾದಷ್ಟು ಕಷಾಯವನ್ನು

ದಿನಕ್ಕೆ 3 ಬಾರಿ ಸೇವಿಸಬೇಕು.

**ಎಚ್ಚರಿಕೆ:** ಔಷಧ ಪ್ರಯೋಗ ಇದ್ದಾಗಲೂ, ಜ್ವರ ವಿಪರೀತ ಏರಿದಾಗ ಚಂಡಿ ಬಟ್ಟೆಯನ್ನು ಹಣೆ, ಎದೆಯ ಭಾಗ ಮತ್ತು ಒಟ್ಟಾರೆ ಮೈಯನ್ನು ಸವರಬೇಕು. ಮೈಬಿಸಿಯನ್ನು ಚಂಡಿ ಬಟ್ಟೆಯ ಮೂಲಕ ಹೊರ ತೆಗೆಯುವುದೇ ಸೂಕ್ತ ಮುನ್ನೆಚ್ಚರಿಕೆ ಸಾಮಾನ್ಯವಾಗಿ ಜ್ವರ ಇರುವಾಗ ಆಹಾರ ರುಚಿಸುವುದಿಲ್ಲ. ಆದರೂ ಮೆದು ಗಂಜಿಯನ್ನು ಬಿಸಿಬಿಸಿಯಾಗಿ ಸೇವಿಸಬೇಕು. ದಿನಕ್ಕೆ 4 ಲೀಟರು ನೀರು ಕುಡಿಯುವುದು ಒಳ್ಳೆಯದು,. ನೀರಿಗೆ ಉಪ್ಪು ಹಾಕಿ ಅಥವಾ ಸಕ್ಕರೆ ಬೆರೆಸಿದರು ಆಗಬಹುದು.

**ಗಂಟಲು ನೋವು, ಕಫ:** ಕಾಡುಗಳಲ್ಲಿ ದೊಡ್ಡ ದೊಡ್ಡ ಮರಗಳಲ್ಲಿ ಮಂತುಹುಳಿ ಎಂಬ ಬೆಲೆ ಬಾಳುವ ಹಣ್ಣುಗಳು ಮಳೆಗಾಲದಲ್ಲಿ ಸಿಗುತ್ತದೆ. ಹಳ್ಳಿಗಳಲ್ಲಿ ಈ ಹಣ್ಣುಗಳನ್ನು ಸಂಗ್ರಹಿಸಿ ಅದರ ಸಿಪ್ಪೆಯನ್ನು ಒಣಗಿಸಿ ಮಾರಾಟ ಮಾಡಿ ಹಣ ಸಂಪಾದಿಸುತ್ತಾರೆ. ಆದರೆ ಅದರ ಬೀಜಗಳನ್ನು ಸಂಗ್ರಹಿಸಿ ಬಟ್ಟೆಯಲ್ಲಿ ಕಟ್ಟಿ ಸೋಸಿದಾಗ ಸಿಗುವ ರಸವನ್ನು ಚೆನ್ನಾಗಿ ಕುದಿಸಿ ಇಟ್ಟುಕೊಳ್ಳಬೇಕು. ಬಹಳ ಸಮಯ ಕೆಟ್ಟು ಹೋಗದ ಈ ಹುಳಿ ರಸವನ್ನು ಮಾಂಸದ ಅಡುಗೆಯಲ್ಲಿ ಬಳಸುತ್ತಾರೆ. ಈ ರಸವನ್ನು ಶೀತದಿಂದಾಗುವ ಗಂಟಲು ನೋವಿಗೆ ಗಂಟಲಿನ ಒಳ ಮತ್ತು ಹೊರ ಬದಿಯಿಂದ ಹಚ್ಚಬೇಕು. ಹೀಗೆ ಆಗಾಗ ಮಾಡುತ್ತಿದ್ದರೆ ನೋವು ಕಡಿಮೆಯಾಗುತ್ತದೆ. ಹಿಂದಿನ ಕಾಲದಲ್ಲಿ ಬೇಲಿಗಳಲ್ಲಿ ಬೆಳೆಸುತ್ತಿದ್ದ ನೀಲಿ ಸೊಪ್ಪು (ಅನ್‌ರೋಡ್, ಆಡು ಸೋಗೆ) ಎಂದ ಗಿಡದ ಎಲೆಗಳನ್ನು ರಸ ತೆಗೆದು ಬಿಸಿಮಾಡಿ ರುಚಿಗೆ ಜೇನು ತುಪ್ಪ ಸೇರಿಸಿಕೊಂಡು 2 ಚಮಚದಂತೆ 4 ದಿನ ತೆಗೆದುಕೊಳ್ಳಬೇಕು. ಸಣ್ಣ ಮಕ್ಕಳಿಗೆ ಒಂದು ಬಿಂದು ಕೊಡಬಹುದು.

ಹಿಂದಿನ ದಿನಗಳಲ್ಲಿ ನೇರಳೆ ಹಣ್ಣು ತಿನ್ನದವರೆ ಇರಲಿಕ್ಕಿಲ್ಲ, ಆದರೆ ಈಗ ಪರಿಚಯವೇ ಇಲ್ಲ ಎಂಬ ಮಟ್ಟಿಗೆ ಬಂದಿರುವ ಕುಂಟು ನೇರಳೆ ಮರಗಳಲ್ಲಿ ನೇರಳೆ ಹಣ್ಣುಗಳು ಗೊಂಚಲುಗಳಾಗಿ ಬೆಳೆಯುತ್ತದೆ. ಹಣ್ಣಾಗಿ ಕೆಳಗೆ ಬೀಳುತ್ತದೆ. ಈ ಹಣ್ಣು ಸಿಹಿಯಾಗಿದ್ದು ಮಕ್ಕಳು ತಿನ್ನುತ್ತಾರೆ. ಮಾತ್ರವಲ್ಲದೇ ಪಕ್ಷಿಗಳಿಗೂ ಆಹಾರ ಈ ಮರದ ಸಿಪ್ಪೆಯನ್ನು ಜಜ್ಜಿ ರಸ ತೆಗೆದು ದೊಡ್ಡವರಿಗೆ ಮೂರು ಚಮಚ ಸಣ್ಣ ಮಕ್ಕಳಿಗೆ ಅರ್ಧ ಚಮಚದಂತೆ 3 ದಿನ ತೆಗೆದುಕೊಳ್ಳಬೇಕು.

ಗಂಟಲಿನಲ್ಲಿ ಏನೂ ತಿಂದರು ಕಟ್ಟಿದಂತೆ ಭಾಸವಾಗುವುದು. ಇದಕ್ಕೆ ಕಾಡುಗಳಲ್ಲಿ ಮುಳ್ಳುಗಳಿಂದ ಕೂಡಿದ "ಕಾವಟೆ" ಮರಗಳು ಸಿಗುತ್ತದೆ. ಇದರ ಕೆತ್ತೆಯನ್ನು ಸ್ವಲ್ಪ ಉಪ್ಪಿನಲ್ಲಿ ಅರೆದು ಗಂಟಲಿನ ಹೊರಗೆ ಮತ್ತು ಒಳಗೆ ಹಚ್ಚಿಕೊಳ್ಳುವುದು ಒಳ್ಳೆಯದು. ಇದೇ ಮರದಲ್ಲಿ ಚಿಕ್ಕ ಚಿಕ್ಕ ಕಾಯಿಗಳ ಗೊಂಚಲುಗಳಾಗಿ ಒಣಗಿ ಬೀಳುವಾಗ ಸಿಪ್ಪೆ ಒಡೆಯುತ್ತದೆ. ಮತ್ತು ಪರಿಮಳದಿಂದ ಕೂಡಿರುತ್ತದೆ, ಈ ಬೀಜವನ್ನು ಶೀತದವರು ಬಾಯಿಗೆ ಹಾಕಿಕೊಳ್ಳುವುದರಿಂದ ಶೀತ ಕಡಿಮೆಯಾಗುತ್ತದೆ.

**ವಾಂತಿ:** ನಿಂಬೆ ಹಣ್ಣಿನ ಸರಬತ್ ಕುಡಿಯುವುದು ಅದ್ಕೆ ಸ್ವಲ್ಪ ಜೇನು ತುಪ್ಪ ಸೇರಿಸಿಕೊಳ್ಳಬೇಕು.

ವಾಹನಗಳಲ್ಲಿ ಸಂಚರಿಸುವಾಗ ವಾಂತಿ ಬರುತ್ತಿದ್ದರೆ ನಿಂಬೆ ಹುಳಿಯನ್ನು ಕೈಯಲ್ಲಿ ಹಿಡಿದುಕೊಂಡಿರಬೇಕು. ಅದರ ರಸ ಮತ್ತು ವಾಸನೆ ಸೇವನೆ ಮಾಡುತ್ತಿದ್ದರೆ ಸ್ವಲ್ಪ ವಾಂತಿ ಕಡಿಮೆ ಮಾಡಬಹುದು.

ತುಳಸಿ ಎಲೆಗಳನ್ನು ಕೈಯಲ್ಲಿ ಹಿಡಿದುಕೊಂಡು ವಾಂತಿ ಬರುವ ಹೊತ್ತಿಗೆ ಸುವಾಸನೆ ತೆಗೆದುಕೊಳ್ಳಬಹುದು.

ವಾಂತಿ ಮಾಡಿ ತುಂಬಾ ಆಯಾಸಗೊಂಡರು ಸಿಯಾಳ ಕುಡಿಯುವುದು ಅಥವಾ ಬಿಸಿ ನೀರಿಗೆ ಉಸಕ್ಕರೆ ಸೇರಿಸಿ ಕುಡಿಯಬಹುದು. ಪ್ರಯಾಣದ ವೇಳೆ ವಾಂತಿ ಬರುವವರು ಹಿತ ಮಿತ ಆಹಾರ ಸೇವಿಸಬೇಕು ಮತ್ತು ಸಿಹಿ ಆಹಾರ ಸೇವಿಸದೆ ಇರುವುದು ಉತ್ತಮ.

ಗರ್ಭಿಣಿಯರಿಗೆ ವಾಂತಿಯಾಗುತ್ತಿದ್ದರೆ ಕರಿಬೇವಿನ ಎಲೆಗಳನ್ನು ರಸ ತೆಗೆದು ಜೇನುತುಪ್ಪ ಸೇರಿಸಿ ತೆಗೆದುಕೊಳ್ಳಬೇಕು.

**ಬಿಳಿಮಚ್ಚೆ (ಸುಬ್ಬ) :** ಮದುರಂಗಿ ಎಲೆಗಳನ್ನು 100 ಗ್ರಾಂನಷ್ಟು ತೆಗೆದುಕೊಂಡು ಅರ್ಧ ಲೀಟರ್ ನೀರಿಗೆ ಹಾಕಿ ಕುದಿಸಿ ಎರಡು ಲೋಟ ಆಗುವಾಗ ಇಳಿಸಿ ತಣಿಸಿ ಕುಡಿಯುವುದು. ಕುಕ್ಕು ಶುಂಠಿ ಇದನ್ನು ನೀರಿನ ಭಾಗಗಳಲ್ಲಿ ತೆಂಗಿನ, ಅಡಿಕೆ ಗಿಡದ ಬುಡಗಳಲ್ಲಿ ನೆಟ್ಟು ಬೆಳೆಸುವ ಗಿಡ ನೋಡಲು ಅರಸಿನ ಎಲೆಗಳಂತೆಯೆ ಹೋಲುವ ಇದರ ಎಲೆಗಳು ಮತ್ತು ಗೆಡ್ಡೆ ಮೇಲಿನಿಂದ ನೋಡಲು ಅರಸಿನ ಗೆಡ್ಡೆಯಂತೆಯೇ ಕಾಣುತ್ತದೆ. ಅದರ ಪರಿಮಳ ಶುಂಠಿಯಂತಿರುತ್ತದೆ. ಇದನ್ನು ಚಟ್ನಿ ಮಾಡಿ ಊಟ ಮಾಡಲೂ ಉಪಯೋಗಿಸುತ್ತಾರೆ. ಈ ಶುಂಠಿ ಗೆಡ್ಡೆಗಳನ್ನು ಮೊಸರಿನಲ್ಲಿ ಅರೆದು ಮಚ್ಚೆಯ ಭಾಗಗಳಿಗೆ ಹಚ್ಚುವುದು. ಹೀಗೆ ದಿನಕ್ಕೆ 2 ಸಲದಂತೆ 4 ದಿನ ಹಾಕಿ ಎರಡು ಗಂಟೆ ಕಳೆದ ನಂತರ ಸ್ನಾನ ಮಾಡಬೇಕು. ಬಿಳಿಮಚ್ಚೆ ಒಬ್ಬರಿಂದ ಒಬ್ಬರಿಗೆ ಹರಡುವುದರಿಂದ ಅವರ ಬಟ್ಟೆಯನ್ನು ಅಥವಾ ಸ್ನಾನದ ಸಾಬೂನು ಪ್ರತ್ಯೇಕವಾಗಿಟ್ಟುಕೊಳ್ಳಬೇಕು.

**ರಕ್ತ ಕಟ್ಟಲು ಗಾಯ:** ಯಾವುದೇ ಗಾಯಗಳಾಗಿ ರಕ್ತ ಸುರಿಯುತ್ತಿದ್ದರೆ ತಕ್ಷಣ ಅರಿಸಿನ ಹುಡಿ ಹಾಕಿ ಬಟ್ಟೆ ಕಟ್ಟಬೇಕು. ಇದು ನಂಜಿಯನ್ನು ಹೀರಿ ರಕ್ತ ಕಟ್ಟಿ ಗಾಯ ಒಣಗುತ್ತದೆ.

ಗಟ್ಟದ ಹರಳು (ಕಾಚಿ) ಗಿಡವನ್ನು ಕತ್ತರಿಸಿ ಅದರ ರಸವನ್ನು ಗಾಯಕ್ಕೆ ಬಿಡಬೇಕು ಮತ್ತು ಬಟ್ಟೆ ಕಟ್ಟಬೇಕು. ಹಿಂದಿನ ಕಾಲದಲ್ಲಿ ಎಲ್ಲಾ ಬೇಲಿಗಳಲ್ಲಿ ಈ ಗಿಡಗಳಿರುತ್ತಿದ್ದವು. ಈಗ ಅಪರೂಪವಾಗಿವೆ.

ತೆಂಗಿನಕಾಯಿಯ ನೀರನ್ನು ಸಂಗ್ರಹಿಸಿಕೊಂಡು ಒಂದು ಲೀಟರ್‌ನಷ್ಟು ಆದಾಗ ಚೆನ್ನಾಗಿ ಕುದಿಸಿ 100 ಗ್ರಾಂ ಆಗುವಷ್ಟರಲ್ಲಿ ಇಳಿಸಿ ಬಿಸಿ ಕಡಿಮೆಯಾದಾಗ ಡಬ್ಬದಲ್ಲಿ ತುಂಬಿಸಿಟ್ಟುಕೊಳ್ಳಬೇಕು. ಕೆಲವು ಸಮಯದವರೆಗೆ ಕೆಡುವುದಿಲ್ಲ. ಇದನ್ನು ಕತ್ತಿ ಗಾಯ, ಮುಳ್ಳು ಚುಚ್ಚಿದಂತಹ ಗಾಯಕ್ಕೆ ತಕ್ಷಣ ಹಚ್ಚಬೇಕು. ಒಮ್ಮೆ ವಿಪರೀತ ಉರಿ ಕಂಡು ಬಂದರೂ ಗಾಯ ಬೇಗನೆ ಒಣಗುತ್ತದೆ.

ಸಣ್ಣ ಪುಟ್ಟ ಗಾಯಗಳಾಗಿ ರಕ್ತ ಸುರಿಯುತ್ತಿದ್ದರೆ ಆಗ ಕಮಿನಿಷ್ಟ್ ಸೊಪ್ಪನ್ನು ಜಜ್ಜಿ ರಸವನ್ನು ಗಾಯಕ್ಕೆ ಹಚ್ಚಿ ಶುದ್ಧ ಬಟ್ಟೆ ಕಟ್ಟುವುದು. ಕಮಿನಿಷ್ಟ್ ಗಿಡಗಳು ತೋಟಗಳಲ್ಲಿ,

ಸೊಪ್ಪಿನ ಗುಡ್ಡೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

ಗಾಯದ ಪ್ರಮಾಣ ದೊಡ್ಡದಾಗಿದ್ದಾಗ ಮತ್ತು ಕಬ್ಬಿಣದಿಂದಾಗುವ ಗಾಯಗಳಾದರೆ ವೈದ್ಯರ ಸಲಹೆ ಚಿಕಿತ್ಸೆ ಅಗತ್ಯ.

**ಪಿತ್ತ:** ಪಿತ್ತದಿಂದ ತಲೆ ತಿರುಗುವುದು, ಕಣ್ಣು ಹಳದಿ ಬಣ್ಣಕ್ಕೆ ತಿರುಗುವುದು, ವಾಂತಿ ಇತ್ಯಾದಿ ಸಮಸ್ಯೆಗಳು ಕಂಡುಬರುತ್ತದೆ. ಇದಕ್ಕೆ ನೆಲನೆಲ್ಲಿ ಎನ್ನುವ ಸಣ್ಣ ಗಿಡ ಸಾಮಾನ್ಯ ಬಯಲು ಪ್ರದೇಶಗಳಲ್ಲಿ ಕಂಡು ಬರುತ್ತವೆ. ಇದರಲ್ಲಿ ಬಿಳಿ ಮತ್ತು ಕೆಂಪು ಎಂಬ ಎರಡು ವಿಧಗಳಿರುತ್ತದೆ. ಬಿಳಿ ಉತ್ತಮ. ಈ ಗಿಡಗಳನ್ನು ಬೇರು ಸಮೇತ ಕಿತ್ತುಕೊಂಡು ಚೆನ್ನಾಗಿ ತೊಳೆದು ಒಂದು ಲೀಟರ್ ನೀರಿನಲ್ಲಿ ಒಂದು ಹಿಡಿ ಗಿಡಗಳನ್ನು ಹಾಕಿ ಕುದಿಸಬೇಕು. ಅರ್ಧಲೀಟರ್ ಆಗುವಷ್ಟು ಕುದಿದಾಗ ರಸ ಬಿಟ್ಟು ಕಷಾಯ ಸಿದ್ಧಗೊಳ್ಳುತ್ತದೆ. ಅದನ್ನು ಖಾಲಿ ಹೊಟ್ಟೆಗೆ ಒಂದು ಲೋಟದಂತೆ 6 ದಿನ ಕುಡಿಯಬೇಕು. ಹಳದಿ ಕಾಯಿಲೆ ಇದ್ದವರು ಇದನ್ನು ಕುಡಿಯುವುದು ಉತ್ತಮ .

ಕಹಿ ಹುಳಿ –ಕಿತ್ತಳೆ ಹಣ್ಣಿನಾ ಹಾಗೇ ಇರುವ ಈ ಹುಳಿ ಕಹಿಯಾಗಿರುತ್ತದೆ. ಸಿಪ್ಪೆ ತೆಗೆದು ಚಟ್ನಿ ಮಾಡಿ ಊಟ ಮಾಡಬಹುದು. ಅಥವಾ ಜ್ಯೂಸ್, ಮಾಡಿ ಕುಡಿಯಲೂಬಹುದು.

ನೆಲ್ಲಿ ಕಾಯಿ ಒಣಗಿಸಿಟ್ಟುಕೊಂಡು ಹಾಲಿನಲ್ಲಿ ಅರೆದು ತಲೆಗೆ ಲೇಪ ಹಾಕಿ ಗಂಟೆ ಬಿಟ್ಟು ಸ್ನಾನ ಮಾಡಬೇಕು. ಹೀಗೆ 4 ದಿನ ಮಾಡಬೇಕು.

ದೊಡ್ಡಪತ್ರೆ ಸೊಪ್ಪು (ತಾಂಬ್ರಾಣಿ) ಮತ್ತು ಎರಡು ಹರಳು ಉಪ್ಪು ಸೇರಿಸಿ ರಸ ತೆಗೆದು ಬೆಳಿಗ್ಗೆ ಖಾಲಿ ಹೊಟ್ಟೆಗೆ ಒಮ್ಮೆಗೆ ನಾಲ್ಕು ಎಲೆಗಳಂತೆ 4 ದಿನ ಕುಡಿಯಬೇಕು.

ಪಿತ್ತದವರು ಅಂದರೆ ಹಳದಿ ಕಾಯಿಲೆಯಲ್ಲದವರು ಒಳ್ಳೆಕೊಡಿಯನ್ನು ಹಾಲಿನಲ್ಲಿ ಅರೆದು ತಲೆಗೆ ಲೇಪ ಹಾಕುವುದು ಮತ್ತು ಒಳ್ಳೆಕೊಡಿ, ಹಾಲು ಮತ್ತು ಜೀರಿಗೆಯನ್ನು ನಾಲ್ಕು ಕಾಳುಗಳನ್ನು ಅರೆದು ಖಾಲಿ ಹೊಟ್ಟೆಗೆ ತೆಗೆದುಕೊಳ್ಳುವುದು ಹೀಗೆ 10 ದಿನ ಮಾಡಬೇಕು. ಇದೇ ಮದ್ದು ಬೊಜ್ಜನ್ನು ನಿಯಂತ್ರಿಸುವ ಗುಣವನ್ನು ಹೊಂದಿರುವುದರಿಂದ ಬೊಜ್ಜು ಇದ್ದವರಿಗೆ ಎರಡು ಕಾಯಿಲೆ ಜೊತೆಯಲ್ಲಿ ಗುಣವಾಗುತ್ತದೆ. ಆದರೆ ಬಡಕಲು ಶರೀರದವರು ಪಿತ್ತವಿದ್ದಾಗ ಈ ಮದ್ದು ಸೇವಿಸಿದ್ದಲ್ಲಿ ತುಂಬಾ ಸುಸ್ತು ಕಾಣಿಸಿಕೊಳ್ಳುವುದು. ಹಾಗಾಗಿ ಜಾಗ್ರತೆ ವಹಿಸಿಕೊಳ್ಳಬೇಕು.

**ಕಜ್ಜಿ ತೊಳೆಯಲು:** ಯಾವುದೇ ರೀತಿಯ ಕಜ್ಜಿ, ಹುಣ್ಣುಗಳನ್ನು ತೊಳೆಯಲು ಕಾಡಿನಲ್ಲಿ ದೊಡ್ಡ ಗಾತ್ರಗಳಾಗಿ ಬೆಳೆಯುವ ದಡ್ಡಾಲ್ ಮರದ ತೊಗಟೆಗಳನ್ನು ನೀರಿನಲ್ಲಿ ಹಾಕಿ ಚೆನ್ನಾಗಿ ಕಾಯಿಸಿದಾಗ ಅದರ ರಸ ಬಿಡುತ್ತದೆ. ಇದು ಕಜ್ಜಿ ಹುಣ್ಣುಗಳನ್ನು ಸ್ವಚ್ಚಗೊಳಿಸುವ ಪ್ರಾಕೃತಿಕ ಲೋಷನ್.

**ಕುರು :** ಕುರು ಎನ್ನುವುದು ಕೀವು ತುಂಬಿಕೊಂಡು ದಪ್ಪಗಾಗಿ ಎದ್ದು ವಿಪರೀತ ನೋವಿನಿಂದ ಕೂಡಿರುವ ಒಂದು ರೀತಿಯ ಕಜ್ಜಿ. ಇದು ಶರೀರದ ಸಂಧಿಗಳಲ್ಲಿ ಹೆಚ್ಚಾಗಿ ಕಾಣಿಸುತ್ತದೆ. ಇದಕ್ಕೆ ಬಿಳಿ ಬೂರುಗ ಮರದ ಕೆತ್ತೆಯನ್ನು ಅರೆದು ಕುರುವಿನ ಸುತ್ತ ಕಣ್ಣು

ಬಿಟ್ಟು ಹಚ್ಚಬೇಕು.

ಬಿಳಿ ದಾಸವಾಳದ ಹೂವಿನ ಮೊಗ್ಗುಗಳ ದೋಸೆ ಅಂದರೆ ಬೆಳ್ತಿಗೆ ಅಕ್ಕಿ ಜೊತೆ ಬಿಳಿ ದಾಸವಾಳ ಹೂವಿನ ಮೊಗ್ಗುಗಳನ್ನು ಸೇರಿಸಿ ರುಬ್ಬುವುದು ಅದಕ್ಕೆ ಉಪ್ಪು ಹಾಕಬಾರದು. ಈ ದೋಸೆ ಆಗಾಗ ತಿನ್ನುತ್ತಿದ್ದರೆ ಕುರುವಿನಿಂದ ಶಾಶ್ವತ ಬಿಡುಗಡೆ ಪಡೆಯಬಹುದು.

ಕಟ್ಟಡಗಳನ್ನು ಕಟ್ಟಲು ಉಪಯೋಗಿಸುವ ಉಪ್ಪಳಿಕೆ ಮರ ಕಾಡುಗಳಲ್ಲಿರುತ್ತದೆ. ಇದರ ಕೊಂಬೆ ಕಡಿದಾಗ ಕೆಂಪು ಅಂಟು ಹೊರಬರುತ್ತದೆ. ಈ ಅಂಟನ್ನು ಕುರುವಿನ ಭಾಗಕೆ ಹಚ್ಚಬಹುದು.

ಕಾಡು ಬಸಳೆ: ಇದು ಸಾಂಬಾರು ಮಾಡುವ ಬಸಳೆಯ ಎಲೆಗಳ ಹಾಗೆಯೇ ಸಣ್ಣ ಸಣ್ಣ ಗಿಡಗಳಾಗಿ ನೀರಿನ ಭಾಗಗಳಲ್ಲಿ ತೋಟಗಳಲ್ಲಿ ಬೆಳೆಯುತ್ತದೆ. ಇದರ ಎಲೆ ಮತ್ತು ನಿಂಬೆ ರಸವನ್ನು ಸೇರಿಸಿ ಅರೆದು ಲೇಪ ಹಾಕಬೇಕು. ಕುರುವಿನ ಮದ್ಯಭಾಗ ಬಿಟ್ಟು ಹಚ್ಚುವುದರಿಂದ ಉರಿ ಕಡಿಮೆಯಾಗಿ 2 ದಿನಗಳಲ್ಲಿ ಸೋರಿ ಹೋಗುತ್ತದೆ.

## ಕಾಡ್

ಬಣ್ಣ ಬಣ್ಣದ ಹೂವು ಬಣ್ಣ ಬಣ್ಣದ ಹಕ್ಕಿ
ಬಣ್ಣ ಬಣ್ಣದ ಪಾತೆ ಕಾಡಿಲತ್:
ರಾತ್ರಿ ಬಲ್ಲೆಯ ಮೇಲೆ ಮಿಂಚುಹುಳಗಳ ಮಾಲೆ
ಡಿಮ್ಮು ಡಿಪ್ಪಿನ ಬಲ್ಬು– ಗೊಂಚಲತ್!

**ಕುತ್ಯಾಳ ನಾಗಪ್ಪ ಗೌಡ (ಕಿರಣ)**

## ಟ್ಟೆ ಟ್ಟೆ ಟ್ಟೆ

ಅಷ್ಟ್ ಕೊಟ್ಟೆ ಇಷ್ಟ್ ಕೊಟ್ಟೆ
ಕೊಚ್ಕೊಂಡಿತ್ ಲೊಟ್ಟೆ
ಕೇಸ್ ಹತ್ತಿತ್ ಕೋರ್ಟಿನ್ಕಟ್ಟೆ
ಅಲ್ಲಿ ಅಣ್ಣ ಟ್ಟೆ ಟ್ಟೆ ಟ್ಟೆ!

**ಕುತ್ಯಾಳ ನಾಗಪ್ಪ ಗೌಡ (ಕಿರಣ)**

# ಅರೆಬಾಸೆ ಗಾದೆಗ

ಎಂ.ಜಿ ಕಾವೇರಮ್ಮ

1. ನೀರ್ ನೊಟ್ಟಿಗೆ ಸಿಟ್ಟ್ ಮಾಡ್ರೆ ಮುಕ್ಳಿಲಿ ಹುಳಾದು
2. ಯಾರಿಗೆ ಯಾರಿಲ್ಲೆ, ದಾರಿಗೆ ಸಂಗಾತ ಇಲ್ಲೆ.
3. ಕಕ್ಕೆ ಹೇಳ್ತ್ ಗಡ, 'ನಾ ಎಲ್ಲರ ಹೇಲ್ ತಿಂದನೆ, ನನ್ನ ಹೇಲ್ ಯಾರ್ ತಿಂದವೆ?'
4. ಕುರ್ಡಿ ಬೊಸ್ರಿ ಆದರೆ ಹೆರಿಕೆ ಜಾಗೆ ಇಲ್ಲೆ ಗಡ
5. ಅಂಡೆ ಬಾಯಿ ಕಟ್ಟಿರೂ, ದೊಂಡೆ ಬಾಯಿ ಕಟ್ಟಿಕೆ ಆಕಿಲ್ಲೆ
6. ಕರ್‍ಯಕನ ಬಾರದ ನಾಯಿ ಕೆರ್‍ಯಕನ ಬಾತ್ ಗಡ
7. ತಲೆಗೆ ಬಿದ್ದ ನೀರ್ ಕಾಲಿಗೆ ಬೀಳದೆ ಎಲ್ಲಿಗೆ ಹೋದೆ?
8. ಮೀಸೆ ಬಾಕನ ದೇಸ ಕಾಂಬಕಿಲ್ಲೆ, ಮೊಲೆ ಬಾಕನ ನೆಲ ಕಾಂಬೊಕಿಲ್ಲೆ.
9. ದೊಡ್ಡಂವ ತಿಂಬೊದು ಮೊದ್ದಿಗೆ, ಬಡಂವ ತಿಂಬೊದು ಹೊಟ್ಟೆಗಿಲ್ಲದೆ.
10. ಮೂರು ಹೆತ್ತದ್ ಆರ್ ಹೆತ್ತದ್‌ಕೆ ಬುದ್ದಿ ಹೇಳ್ತ್ ಗಡ
11. ಮನೆಂದ ದೊಡ್ಡ ಮೆಟ್ಟ್ ಕಲ್ಲ್ ಇರಿಕೆ ಆಗದ್
12. ಕೋಲ್ ಕಡ್ದರೆ ಎರ್ಡಾದೆ, ನೀರ್‍ನ ಕಡ್ದರೆ ಎರ್ಡಾದೆನೋ?
13. ಹೇಲ್ ಬಾಕನ ಹಿತ್ಲ್ ಹುಡ್ಕಿತ್
14. ತಾಯಿ– ಮಕ್ಕ ಅದರೂ ಬಾಯಿ ಬೇರೆ ಬೇರೆ
15. ಬಂಜೆಗೇನ್ ಗೊತ್ತ್? ಹೆರ್‍ಗೆ ಬೇನೆ
16. ನೂರ್ ಜುಟ್ಟುನ ಆದರ್ ಸೇರ್‍ಸಕ್ ಮೂರು ಜಡೆನ ಸೇರ್‍ಸುದು ಕಷ್ಟ
17. ಜಗ್ಲಿ ಹಾರಿಕೆ ಬೊತ್ತದಂವ ಗಗನ ಹಾರ್ತ್ ಗಡ
18. ಗಂಡ– ಹೆಣ್ಣ್‌ನ ಜಗಳ ಉಂಡ್ ಮೊಲ್ಗಿಕನ ಮುಟ್ಟ
19. ಊರಿಗೆ ಅರ್‍ಸ ಆದರ್‌ನೂ ಅಯ್ಯೆಗೆ ಮಂಜನೇ
20. ಹೊಸ ಗೋಣಿನ ಮೊಡ್ಯಾಳ ಎತ್ತಿ ಎತ್ತಿ ಓಗ್ತ್ ಗಡ
21. ಅಪ್ಪ ನೆಟ್ಟ ಆಲದ ಮರಾಂತ ಬೊಳ್ಳಿ ತಕಂಡ್ ಸಾಯಕೆ ಆದೆನೋ?
22. ಅಜ್ಜಿ ಸಾಂಕಿದ ಮುಳ್ಳಿ ಬೊಜ್ಜಕ್ಕೂ ಆಕಿಲ್ಲೆ

23. ಕೊತ್ತಿ ಇಲ್ಲದ ಕಣಲಿ ಎಲಿಗ ಕರ್ಣಕುತ್ತ ಹಾರ್‍ದ್ದೊಗಡ
24. ಮೂರ್ಕಾಸಿಗೆ ಹೋದ ಮಾನ ಆರ್ಕಾಸ್ ಕೊಟ್ಟರೆ ಬಂದದೆನೋ?
25. ಅಟ್ಟ ಹತ್ತಿಕೆ ಬೊತ್ತದಂವ ಗಟ್ಟ ಹತ್ತಿತ್ ಗಡ
26. ಕಕ್ಕೆ ಕುದ್ದದುಕ್ಕೂ ಮಡ್ಲ್ ಬಿದ್ದದುಕ್ಕೂ ಸಮಾ ಆತ್
27. ಕೊಣ್ಯಕೆ ಗೊತ್ತಿಲ್ಲದಂವ ಇಜ್ಜೆಲ್ ಸರಿ ಇಲ್ಲೆಂತ ಹೇಳ್ತ್ ಗಡ
28. ಗೆದ್ದರೆ ಎಲ್ಲೋವೂ ಒಳೊ, ಬಿದ್ದರೆ ನಾಯಿನೂ ಮೂಸಿ ನೋಡಿಕಿಲ್ಲೆ
29. ಕಂಡದರ ಕಂಡ ಹಾಂಗೆ ಹೇಳ್ರೆ ಗೆಂಡದಂತ ಕೋಪ ಬಂದದೆ ಗಡ
30. ನಾಯಿ ಮೊಲೆಲಿ ಹಾಲಿದ್ದರೆ ಕುಡ್ಯಕೆ ಆದೆನೋ?
31. ರಟ್ಟೆ ಗಟ್ಟಿ ಇದ್ದಂವ ಗಟ್ಟ ಹತ್ತಿರೂ ಬೊದ್ಕುದು
32. ದುಡ್ಡ್ ತಿಂಬಂವಂಗೆ ಎಲ್ಲಿ ಆದರ್ ಏನ್?
33. ಕೊಪ್ಪರಿಗೆ ಹಣ ಇದ್ದರೂ ಸಾಯಕನ ಹೊತ್ತ್‌ಕಂಡ್ ಹೋದ್ಲೆ
34. ಪ್ರಾಯಕ್ಕೆ ಬಂದ ಹೆಣ್ಣ್ ಮಕ್ಕಳ ಸಾಂಕುದು ಸೆರ್‌ಂಗ್ (ಮೊಟ್ಟೆ)ಲಿ ಗೆಂಡ ಕಟ್ಟಿಕಂಡ ಹಾಂಗೆ
35. ಬ್ರಾಹ್ಮಣನ ಆಳಾಗ್ ಬೇಡ, ಮೊಡ್ಯಾಳನ ಕಲ್ಲ್ ಆಗ್‌ಬೇಡ.
36. ಹುಟ್ಟಿಕನ ಒಬ್ಬನೇ ಸಾಯಕನ ಒಬ್ಬನೇ ಒಟ್ಟಿಗೆ ಯಾರ್ ಬಾದುಲ್ಲೆ
37. ಏಮೆ ಉಳ್ಳಿಗೆ ಕಿಚ್ಚ್ ಮೊಟ್ಟಂಗಾತ್
38. ಕೆಬಿ ಕೊಯ್ದ್ ಕೆಪ್ಪಟೆಗೆ ಹಿಡ್ಸಿದ

## ಅಕಾಡೆಮಿ ಹಮ್ಮಿಕಂಡ ಕಾರ್ಯಕ್ರಮಗ

- ದಿನಾಂಕ 04.10.2015 ರಂದ್ ಪುತ್ತೂರು ಒಕ್ಕಲಿಗ ಗೌಡ ಸಮುದಾಯ ಭವನ, ತೆಂಕಿಲ ಇಲ್ಲಿ "ಸಾಂಸ್ಕೃತಿಕ ಸಮಾವೇಶ" ಕಾರ್ಯಕ್ರಮನ ಹಮ್ಮಿಕೊಂಡೊ, ಶ್ರೀಮತಿ ಶಕುಂತಳಾ ಶೆಟ್ಟಿ ಶಾಸಕರ್, ಪುತ್ತೂರು ವಿಧಾನಸಭಾ ಕ್ಷೇತ್ರ, ಇವು ಉದ್ಘಾಟಿಸಿದೊ. ಸನ್ಮಾನ್ಯ ಅರಣ್ಯ ಮತ್ತೆ ಪರಿಸರ ಮಂತ್ರಿಗ ಸಮಾರೋಪ ಭಾಷಣ ಮಾಡ್ದೊ, ವಿಚಾರ ಗೋಷ್ಠಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳ್ನ ಹಮ್ಮಿಕಂಡ್ ಯಶಸ್ವಿಯಾಗಿ ನಡ್ತ್.
- ದಿನಾಂಕ 10.10.2015 ಮತ್ತು 11.10.2015 ರ ಎರಡು ದಿನ "ಸಾಂಸ್ಕೃತಿಕ ವೈಭವ" ಕಾರ್ಯಕ್ರಮನ ಮಡಿಕೇರಿನ ಚೇರಂಬಾಣೆಲಿ ಏರ್ಪಡಿಸಿದ್ದೊ. ಸನ್ಮಾನ್ಯ ಶ್ರೀ ಕೆ.ಜಿ. ಬೋಪಯ್ಯನವು ಉದ್ಘಾಟನೆ ಮಾಡ್ದ ಈ ಕಾರ್ಯಕ್ರಮಲಿ ಸನ್ಮಾನ್ಯ ಶಾಸಕರಾದ ವಾಸು, ಶ್ರೀಮತಿ ವೀಣಾ ಅಚ್ಚಯ್ಯ, ಶ್ರೀ ಟಿ.ಪಿ.ರಮೇಶ್, ಇವು ಮುಖ್ಯ ಅತಿಥಿಗ ಆಗಿದ್ದೊ.
- ಜಿಲ್ಲಾಡಳಿತ ಕೊಡಗು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿವತಿಯಿಂದ ದಿನಾಂಕ 31.10.2015ರಂದ್ ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಹುತಾತ್ಮ ದಿನಾಚರಣೆನ ಹಮ್ಮಿಕೊಂಡಿದ್ದೊ. ಮಡಿಕೇರಿನ ಕಾವೇರಿ ಕಲಾಕ್ಷೇತ್ರಲಿ ನಡ್ದ ಕಾರ್ಯಕ್ರಮನ ಸನ್ಮಾನ್ಯ ಶಾಸಕರ್ ಶ್ರೀ ಕೆ.ಜಿ.ಬೋಪಯ್ಯನೊವು ಕಾರ್ಯಕ್ರಮನ ಉದ್ಘಾಟಿಸಿದೊ. ಅತಿಥಿಗ ಆಗಿ ಶ್ರೀಮತಿ ವೀಣಾ ಅಚ್ಚಯ್ಯ, ಶ್ರೀ ಟಿ.ಪಿ.ರಮೇಶ್, ಶ್ರೀಮತಿ ಬಂಗೇರ, ಶ್ರೀ ಬಿದ್ದಾಟಂಡ ಎಸ್.ತಮ್ಮಯ್ಯ, ಭಾಗವಹಿಸಿದೊ. ಸಾಂಸ್ಕೃತಿಕ ಕಾರ್ಯಕ್ರಮ ಹಂಗೆ ವಿಚಾರಮಂಡನೆ ಏರ್ಪಡಿಸಿದೊ.
- ದಿನಾಂಕ 12.12.2015 ರಂದ್ ನವದೆಹಲಿನ ಕರ್ನಾಟಕ ಸಂಘಲಿ ಸಾಂಸ್ಕೃತಿಕ ಸಂಗಮ ಕಾರ್ಯಕ್ರಮನ ಹಮ್ಮಿಕೊಂಡಿದೊ. ಇದರ ಉದ್ಘಾಟನೆನ ಸನ್ಮಾನ್ಯ ಶ್ರೀ ಪ್ರತಾಪ್ ಸಿಂಹ ಲೋಕಸಭಾ ಸಂಸದರ್ ಮಾಡ್ದೊ, ಸನ್ಮಾನ್ಯ ಶ್ರಿ ಕೆ.ಜಿ.ಬೋಪಯ್ಯ, ಶ್ರೀ ವಾಸು ಮೈಸೂರು, ಪ್ರೊ.ಪುರುಷೋತ್ತಮ ಬಿಳಿಮಲೆ ಶ್ರೀ ವಸಂತ ಶೆಟ್ಟಿ ಬೆಳ್ಳಾರೆ, ಶ್ರೀ ನಂಗಾರು ನಾಣಯ್ಯ, ಇವೆಲ್ಲ ಅತಿಥಿಗ ಆಗಿದ್ದೊ. ಈ ಕಾರ್ಯಕ್ರಮಲಿ ನಾಟ್ಯ ಮಿಲನ ನೃತ್ಯ ಶಾಲೆಯವರ್‌ಂದ ಗೌಡರ ಸಿರಿ ಸಂಸ್ಕೃತಿ ದರ್ಶನ, ಅರೆಭಾಷೆ ಸಂಪ್ರದಾಯ ಕೋಲಾಟ, ವಿದುಶಿ ಪ್ರಮೀಳಾ ಲೋಕೇಶ್ ಮತ್ತೆ ಬಳಗ, ಇವರಿಂದ– ಹೆಜ್ಜೆಗೆಜ್ಜೆ ನಿನಾದೊಳಗೆನುಟ್ಟು ಇಂತೆಲ್ಲ ಸಾಂಸ್ಕೃತಿಕ ಕಾರ್ಯಕ್ರಮನ ನಡ್ಸಿದೊ.

## ಅಕಾಡೆಮಿ ಪ್ರಾಯೋಜಿಸಿದ ಕಾರ್ಯಕ್ರಮಗ.

- ದಿನಾಂಕ 14.06.2015ರಂದ್ ಕೊಡಗು ಗೌಡ ಯುವ ವೇದಿಕೆವು(ರಿ) ಗೌಡರ

ಸಮ್ಮಿಲನ ಜಂಬರ ಕಾರ್ಯಕ್ರಮನ ಹರಿಹರ ಯುವಕ ಸಂಘ ಸಭಾಂಗಣ, ಕಾಜೂರು ಇಲ್ಲಿ ಹಮ್ಮಿಕೊಂಡಿದ್ದೊ. ಈ ಕಾರ್ಯಕ್ರಮಲಿ ನಡ್ದ ಸಾಂಸ್ಕೃತಿಕ ಕಾರ್ಯಕ್ರಮ ಹಾಗೂ ವಿಚಾರ ಸಂಕಿರಣ ಕಾರ್ಯಕ್ರಮಕ್ಕೆ ಅಕಾಡೆಮಿಂದ ಪ್ರಾಯೋಜನೆ ನೀಡಿದ್ದೊ.

- ದಿನಾಂಕ 30.06.2015ರಂದ್ ಮಡಿಕೇರಿ ಕಾವೇರಿ ಹಾಲ್‌ಲಿ, ಕನ್ನಡ ಸಾಹಿತ್ಯ ಪರಿಷತ್ ಮಡಿಕೇರಿ ಇವು 7ನೇ ಕನ್ನಡ ಸಾಹಿತ್ಯ ಸಾಹಿತ್ಯ ಸಮ್ಮೇಳನ ಹಮ್ಮಿಕೊಂಡಿದ್ದೊ. ಈ ಕಾರ್ಯಕ್ರಮಕ್ಕೆ ಎರಡ್ ಕಲಾತಂಡಗಳ ಅಕಾಡೆಮಿಂದ ಪ್ರಾಯೋಜನೆ ಮಾಡ್ಯೊಲೊ.
- ದಿನಾಂಕ 11.10.2015ರಂದ್ ವಿರಾಜಪೇಟೆ ಗೌಡ ಸಮಾಜ(ರಿ) ಇವು ಶ್ರೀ ಕುರುಂಜಿ ಜಾನಕಿ ವೆಂಕಟರಮಣ ಸಮುದಾಯ ಭವನ ವಿರಾಜಪೇಟೆ ಇಲ್ಲಿ ವಾರ್ಷಿಕೋತ್ಸವ ಕಾರ್ಯಕ್ರಮನ ಹಮ್ಮಿಕೊಂಡಿದ್ದೊ. ಈ ಕಾರ್ಯಕ್ರಮದ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಅಕಾಡೆಮಿಂದ ಪ್ರಾಯೋಜನೆ ಮಾಡಲಾಗಿತ್.
- ದಿನಾಂಕ 7.11.2015 ರಂದ್ ಸುವಿಚಾರ ಸಾಹಿತ್ಯ ವೇದಿಕೆ, ಸುಳ್ಯ ಇವ್ರ ವತಿಂದ ಅರೆಭಾಷೆ ಸಾಹಿತ್ಯ ಸಂಭ್ರಮ ಕಾರ್ಯಕ್ರಮನ ನೆಹರು ಸ್ಮಾರಕ ಪದವಿ ಪೂರ್ವ ವಿದ್ಯಾಲಯ, ಅರಂತೋಡು ಇಲ್ಲಿ ನಡ್ಸಿದ್ದೊ. ಇಲ್ಲಿ ನಡ್ದ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಪ್ರಾಯೋಜನೆ ಮಾಡಲಾಗಿತ್.
- ದಿನಾಂಕ 15.11.2015 ರಂದ್ ಗೌಡರ ಯುವ ಸೇವಾ ಸಂಘ ಸುಳ್ಯ ಇವ್ರ ವತಿಂದ ಗೌಡರ ಕ್ರೀಡಾ ಮತ್ತು ಸಾಂಸ್ಕೃತಿಕ ಸಮ್ಮಿಲನ–2015 ಕಾರ್ಯಕ್ರಮನ ಜ್ಯೋತಿ ಪ್ರೌಢಶಾಲೆ, ಪೆರಾಜೆ. ಇಲ್ಲಿ ಏರ್ಪಡಿಸಿದ್ದೊ ಇಲ್ಲಿ ನಡ್ದ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಅಕಾಡೆಮಿಂದ ಪ್ರಾಯೋಜನೆ ಮಾಡಲಾಗಿತ್.
- ದಿನಾಂಕ 22.11.2015 ರಂದ್ ಸೋಮವಾರಪೇಟೆ ಕೊಡಗು ಗೌಡ ಸಮಾಜವತಿಂದ ಹಮ್ಮಿಕಂಡಿದ್ದ್ ವಾರ್ಷಿಕೋತ್ಸವನ ಅಕಾಡೆಮಿ ಪ್ರಾಯೋಜಿಸಿತ್
- ದಿನಾಂಕ 27.12.2015 ರಂದ್ ಶ್ರೀ ಓಂಕಾರೇಶ್ವರ ದೇವಸ್ಥಾನ ಸಮಿತಿಯವು ಕೋಟೆ ಆವರಣ, ಮಡಿಕೇರಿಲಿ ಆಚರ್ಸಿದ ಸಾಂಪ್ರದಾಯಿಕ ಹುತ್ತರಿ ಹಬ್ಬಕೆ ಅಕಾಡೆಮಿ ಕಲಾ ತಂಡನ ಪ್ರಾಯೋಜಿಸಿತ್.
- ಮಡಿಕೇರಿ ಆಕಾಶವಾಣಿಲಿ ಅರೆಭಾಷೆ ಸುದ್ದಿಜೊಂಪೆ ವಾರ್ತೆಗೆ ನವೆಂಬರ್ ತಿಂಗಲಿ ಅರೆಭಾಷೆ ಅಕಾಡೆಮಿ, ಮೂರ್ನಾಡ್ ಗೌಡ ಸಮಾಜ, ಡಿಸೆಂಬರ್ ತಿಂಗಲಿ ಅರೆಭಾಷೆ ಅಕಾಡೆಮಿ, ವಿರಾಜಪೇಟೆ ಗೌಡ ಸಮಾಜ ಸಹಪ್ರಾಯೋಜಕತ್ವಲಿ ಪ್ರಸಾರ ಆಗಿದ್ದ್, ಜನವರಿ ತಿಂಗಲಿ ಅರೆಭಾಷೆ ಅಕಾಡೆಮಿ, ಪಾರಾಣೆ ಗೌಡ ಸಮಾಜ ಸಹ ಪ್ರಾಯೋಜನೆಲಿ ಪ್ರಸಾರ ಆಗ್ತಾವುಟ್ಟು.
- ದಿನಾಂಕ 25.12.2015 ರಂದ್ ಚೌಡೇಶ್ವರಿ ಗೌಡ ಕೂಟ, ಮಡಿಕೇರಿ ಇವರ ವತಿಂದ

ನಡ್ದ ವಾಷಿಕೋತ್ಸವ ಸಮಾರಂಭಲಿ ಅಕಾಡೆಮಿ ಪ್ರಾಯೋಜಕತ್ವಲಿ ಸಾಂಸ್ಕೃತಿಕ ಕಾರ್ಯಕ್ರಮಗಳ್ನ ಹಮ್ಮಿಕೊಂಡಿದ್ದೊ.

- ದಿನಾಂಕ 26.12.2015 ರಂದ್ ನೇತಾಜಿ ವಿದ್ಯಾಸಂಸ್ಥೆ ಬಲ್ಲಮಾವಟಿ ಇವು ಸುವರ್ಣ ಮಹೋತ್ಸವ ಆಚರಿಸಿದ್ದ್, ಈ ಕಾರ್ಯಕ್ರಮಕ್ಕೆ ಅರೆಭಾಷೆ ಅಕಾಡೆಮಿಂದ ಕಲಾ ತಂಡ ಕಳುಹಿಸಲಾತ್
- ದಿನಾಂಕ 28.12.2015 ರಂದ್ ಕೊಡಗು ಗೌಡ ಮಹಿಳಾ ಒಕ್ಕೂಟ (ರಿ), ಮಡಿಕೇರಿ ಇವರ ವತಿಂದ ಹಮ್ಮಿಕಂಡ ಸಾಂಸ್ಕೃತಿಕ ಕಾರ್ಯಕ್ರಮನ ಅಕಾಡೆಮಿ ಪ್ರಾಯೋಜಿಸಿತ್
- ದಿನಾಂಕ 27.12.2015 ರಂದ್ ಪಿಲಿಕುಳ ನಿಸರ್ಗಧಾಮಲಿ ನಡ್ದ ಪಿಲಿಕುಳ ಹಬ್ಬ ಕಾರ್ಯಕ್ರಮಕ್ಕೆ ಅಕಾಡೆಮಿಂದ ನಾಲ್ಕು ಕಲಾತಂಡ ಹಾಗೂ ಮೂರು ಜನ ಹಾಡುಗಾರರ ಅಕಾಡೆಮಿ ಪ್ರಾಯೋನೆಲಿ ಕಳುಹಿಸಿದ್ದೊ.

## ಅಕಾಡೆಮಿಯ ಪ್ರಕಟಣೆಗ

| | | |
|---|---|---|
| ಸರ್ಮಾಲೆ | : | ಎಂ.ಜಿ ಕಾವೇರಮ್ಮ |
| ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ | : | ಎಂ.ಜಿ ಕಾವೇರಮ್ಮ |
| ಬೇರ್‌ಲಿ ಚಿಗ್‌ರ್ | : | ಬೈತಡ್ಕ ಜಾನಕಿ ಬೆಳ್ಯಪ್ಪ |
| ಕುಂಕುಮ | : | ಪೂಜಾರೀರ ಜಿ. ಮಾದಪ್ಪ |
| ಬೊಲ್ಪಾಕನ ಮುಗ್ತ್ | : | ವಿದ್ವಾನ್ ಟಿ.ಜಿ ಮುಡೂರು |
| ಬೇಟೆನ ಬಿರ್ಸ –ಬಡ್ಡಡ್ಕ ಅಪ್ಪಯ್ಯ ಗೌಡ್ರು | : | ವೇದಾವತಿ ಅನಂತ ಬಡ್ಡಡ್ಕ |
| ಬೆಳ್ಳಿಮುಷ್ಟಿ | : | ಕಟ್ರತನ ಕೆ. ಬೆಳ್ಯಪ್ಪ |
| ತೋರಣ | : | ಬಾರ್ಯಂಡ ಆರ್. ಜೋಯಪ್ಪ |
| ಬೊಲ್ಪು | : | ಲೋಕೇಶ್ ಕುಂಚಡ್ಕ |
| ಮತ್ತೆ ಸಿಕ್ಕಿತ್ ಕುಂಕುಮ | : | ಕಟ್ರತನ ಲಲಿತ ಅಯ್ಯನ |

# ಲೇಖಕರ ವಿಳಾಸ

1. **ಎಂ.ಜಿ ಕಾವೇರಮ್ಮ**
   'ನಿಸರ್ಗ' ಮಾವಜಿ– ಸುಳ್ಯ, ದ.ಕ 574239

2. **ಸಂಜೀವ ಕುದ್ಪಾಜೆ**
   ಸಹಾಯಕ ಪ್ರಾಧ್ಯಾಪಕರು,
   ನೆಹರು ಮೆಮೋರಿಯಲ್ ಕಾಲೇಜು, ಸುಳ್ಯ, ದ.ಕ–574327

3. **ವಿನೋದ್**
   ಮಡಿಕೇರಿ, ಕೊಡಗು

4. **ಕೊಕ್ಕಲೇ ಮಾಲಿನಿ ಮುತ್ತಪ್ಪ**
   ಹೆರವನಾಡು ಗ್ರಾಮ, ಅಪ್ಪಂಗಳ ಅಂಚೆ, ಕೊಡಗು 571201

5. **ಶ್ರೀಮತಿ ಅಮೆ ಚಂದ್ರಮ್ಮ**
   ನಿವೃತ್ತ ಮುಖ್ಯ ಶಿಕ್ಷಕಿ, ಮಡಿಕೇರಿ

6. **ಪೂಜಾರೀರ ಸಿ. ಮಾದಪ್ಪ**
   ಅರುವತ್ತೊಕ್ಲು ಗ್ರಾಮ, ಮಡಿಕೇರಿ, ಕೊಡಗು

7. **ಯೋಗೀಶ ಹೊಸೊಳಿಕೆ**
   ಗುತ್ತಿಗಾರು ಅಂಚೆ, ಸುಳ್ಯ, ದ.ಕ 574218

8. **ಬೈಲೇರಾ ಭಾನು ಅಶೋಕ್**
   ಬಿಳಿಗೇರಿ ಗ್ರಾಮ, ಕೊಡಗು

9. **ಕೊಟ್ಟಕೇರಿಯನ ಲೀಲಾ ದಯಾನಂದ**
   ಮಡಿಕೇರಿ, ಕೊಡಗು

10. **ಬಾರಿಕೆ ಶೈಲಜ ದಿನೇಶ್**
    ತಾವೂರು ಮಡಿಕೇರಿ, ಕೊಡಗು

11. **ಡಾ. ಪೂವಪ್ಪ ಕಣಿಯೂರು**
    ಸಹ ಪ್ರಾಧ್ಯಾಪಕರು, ನೆಹರು ಮೆಮೋರಿಯಲ್ ಕಾಲೇಜು, ಸುಳ್ಯ, ದ.ಕ.–574 327

12. **ಕುತ್ಯಾಳ ನಾಗಪ್ಪ ಗೌಡ (ಕಿರಣ)**
    ಕಿರಣ ಕುಟೀರ, ಯುವಜನ ಸಂಯುಕ್ತ ಮಂಡಳಿ ಹತ್ತಿರ, ಸುಳ್ಯ ದ.ಕ–574239

13. **ವಿದ್ವಾನ್ ಟಿ.ಜಿ ಮುಡೂರು ಎಂ.ಎ, ಬಿ.ಎಡ್**
    ಪಂಜ 574232 ಮೊ: 9449324260 / 08257 278338

14. **ಭವಾನಿ ಶಂಕರ ಅಡ್ತಲೆ**
    ಕೆ.ವಿ.ಜಿ, ಐ.ಟಿ.ಐ., ಸುಳ್ಯ, ದ.ಕ. ಕುರುಂಜಿಬಾಗ್–574 327

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

**ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014**

**ಅಧ್ಯಕ್ಷರು:**

**ಶ್ರೀ ಕೊಲ್ಯದ ಗಿರೀಶ್**, ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201
ದೂ: 08272-236515 ಮೊಬೈಲ್ : 9448156599.

**ರಿಜಿಸ್ಟ್ರಾರ್:**

**ಶ್ರೀ ಉಮರಬ್ಬ**, ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು,
ಮೊಬೈಲ್ : 9481149135

**ಅರ್ಥ ಸದಸ್ಯರು:**

**ಶ್ರೀ ಎಸ್.ಐ. ಭಾವಿಕಟ್ಟಿ**, ಉಪನಿರ್ದೇಶಕರು, ರಂಗಾಯಣ ಕಲಾಮಂದಿರ ಮೈಸೂರು,
ಮೊಬೈಲ್ : 9972103262

**ಸದಸ್ಯರು :**

**ಡಾ. ಪೂವಪ್ಪ ಕಣಿಯೂರು** ಸ್ಫೂರ್ತಿ 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು,
ಸುಳ್ಯ ದ.ಕ. ದೂರವಾಣಿ : 08257-232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು,
ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ** ಸೋಣಂಗೇರಿ ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು
ದ.ಕ.- 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್**
ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು, ಮಡಿಕೇರಿ- 574234 ಮೊಬೈಲ್ :
7259135346

**ಶ್ರೀ ಯಶವಂತ ಕುಡೆಕಲ್**
ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. -574239 ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.**
ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು
ದ.ಕ.- 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ ಮಾವಜಿ**
ಮಾವಜಿ, ಮಂಡೆಕೋಲು, ಸುಳ್ಯ ತಾಲೂಕು ದ.ಕ. - 574239 ಮೊಬೈಲ್ : 94481644638

**ಶ್ರೀ ಮೋಹನ್‌ದಾಸ್** ಮಂದ್ರೀರ, ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ
ಮೊಬೈಲ್ : 9448720112

**ಸಹಸದಸ್ಯರು:**

**ಶ್ರೀ ಕುಡೆಕಲ್ ಸಂತೋಷ್** ಕುಡೆಕಲ್, ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ
ತಾಲೂಕು, ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.**
ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ** ಪೈಲೂರು ಮನೆ, ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು
ದ.ಕ. - 574212 ಮೊಬೈಲ್ : 94488058748/9164401745

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ ಬೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್‌ಗ್ಳ ಪರಿಚಯಸ್ತರಿಗೆ ಸದಸ್ಯರ್ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಸ್ಪಷ್ಟ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.

ನಾವ್‌ಗ್ಳ ವಿಳಾಸ :

**ಸಂಪಾದಕರ್**

**ಹಿಂಗಾರ ತ್ರೈಮಾಸಿಕ ಪತ್ರಿಕೆ**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ರಾಜಾಸೀಟ್ ರಸ್ತೆ, ಮಡಿಕೇರಿ – 571 201, ಕೊಡಗು ಜಿಲ್ಲೆ

ಈಮೇಲ್ : arebaseacademy@gmail.com

ವೆಬ್‌ಸೈಟ್ : www.arebaseacademy.com

ದೂರವಾಣಿ : 08272 - 223055



ಕೋಲಾಟ ಪ್ರದರ್ಶನ, ನವದೆಹಲಿ.



ರೂಪಕ, ಹೆಜ್ಜೆ ಗೆಜ್ಜೆ- ನೀನಾದದೊಳಗೇನುಟ್ಟು, ಪಿಲಿಕುಳ ನಿಸರ್ಗಧಾಮ (27.12.2015).



ಸಾಂಸ್ಕೃತಿಕ ಪ್ರದರ್ಶನ, ನವದೆಹಲಿ



ಸಾಂಸ್ಕೃತಿಕ ಸಮಾವೇಶ, ಸಮಾರೋಪ, ಪುತ್ತೂರು (4. 10. 2015)



ಸಾಂಸ್ಕೃತಿಕ ಸಮಾವೇಶ, ಆಶಯನುಡಿ, ನವದೆಹಲಿ. (12. 12. 2015)



ಪ್ರಥಮ ತ್ರೈಮಾಸಿಕ ಸಂಚಿಕೆ– 'ಹಿಂಗಾರ' ಬಿಡುಗಡೆ.



ವಿಚಾರಗೋಷ್ಠಿ, ಸುವಿಚಾರ ವೇದಿಕೆ, ಅರಂತೋಡು. (7.11.2015)